

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೪ ಮಾರ್ಚ್ ೨೦೦೮ ಸಂಚಿಕೆ : ೩

## ಭಕ್ತ ಸಾಗರದ ನಡುವೆ ವೈಭವಪೂರ್ಣ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ರಥೋತ್ಸವ





ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಸೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೪ ಮಾರ್ಚ್ ೨೦೦೮ ಸಂಚಿಕೆ : ೩

## ಒಳಪುಟಗಳಲ್ಲಿ ......................



ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

ॐ

## ಶ್ರೀ ಸಿದ್ಧಲಿಂಗೇಶ್ವರ ವಚನ

***ಕೆಸರಿಲ್ಲದ ಭೂಮಿಯಲ್ಲಿ***
***ಎಸಳಿಲ್ಲದ ಏಕೋ ವರ್ಣದ ತಾವರೆ ಹುಟ್ಟಿತ್ತು***
***ನೋಡಾ***
***ಆ ಭಾವ ತಾವರೆಯಿಂದ ಪೂಜೆಯ ಮಾಡುವ***
***ಶರಣನೇ ದೇವನು ಕಾಣಾ***
***ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.***

ಸಂಸಾರವೆಂಬ ಕೊಗ್ಗೆಸರುಂಟಾದ ಶರಣನ ಚಿದಂಗವೆಂಬ ಧರಣಿಯಲ್ಲಿ ದಳ ಪ್ರಕೃತಿಯುಂಟಾಗದ ಏಕೋಭಾವ ವನುಳ್ಳ ಮನಃಕಮಲವುಂಟಾಗಿಪ್ಪುದೆಂಬುದೀಗ ಕೆಸರಿಲ್ಲದ ಭೂಮಿಯಲ್ಲಿ ಎಸಳಿಲ್ಲದ ಏಕೋ ವರ್ಣದ ತಾವರೆ ಹುಟ್ಟಿತ್ತು ನೋಡಾ ಎಂಬುದಕ್ಕೆ ಅರ್ಥ.

ಆ ಮನಃ ಕಮಲದಿಂದೆ ಪ್ರಾಣಲಿಂಗಕ್ಕೆ ನಿರ್ಗುಣ ಪೂಜೆಯನೆಸಗುವಾತನೆ ಶಿವಶರಣನೆಂಬುದಕ್ಕೆ ಅರ್ಥ. ಆ ಭಾವ ತಾವರೆಯಿಂದ ಪೂಜೆಯ ಮಾಡುವ ಶರಣನೇ ದೇವನು - ಎನ್ನುತ್ತದೆ ವಚನ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ - ವೀರಶೈವ ಅಧ್ಯಯನ ಸಂಸ್ಥೆ- ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ - ಡಂಬಳ- ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

'ಎನಿಸನೋದಿದಡೇನು ? ಎನಿಸ ಕೇಳಿದೊಡೇನು?
ಇನಿಸು ನಿನ್ನ ಚರಣವರಿಯದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪ್ರಣವರೂಪನಾದೆ ಪ್ರಣವಮಂತ್ರವಾದೆ
ಪ್ರಣವಪ್ರಾಣ ಜೀವಾಳವಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪಾಪದೂರನಮಾಡು ತಾಪದೂರನಮಾಡು
ಕಾಪಾಡು ಬಲಗೊಂಬೆ ಶ್ರೀಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾತಿನರಂಜಕರ ಜಾತಿಡಂಬರ ಕಂಡು
ಆತುಮದೊಳಗೆ ನಲುಗಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕರತಲದದೀಪವ ಉರದೊಳಗೆ ಬಿಂಬಿಸುತ
ಶಿರವ ಶಿವಕಲಶಗೈದಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭೂಮಿಭಾರಕನಾನು ಭೂಮಿ ತಾರಕ ನೀನು
ಭೂಮಿ ಸಿರಿಮಾಡುವ ಶಿವಶಿಲ್ಪಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನನ್ನ ತಪ್ಪಿಗೆ ಮುನಿದೆ ನನ್ನ ಪ್ರಾಣಕೆ ಒಲಿದೆ
ಓಜುಗಟ್ಟಿಗೆ ಹಿಡಿದು ಕಲಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಬ್ದಸಾರಾಯದ ಸಿರಿದೀಪವಾಗಿರುವ
ಅಬ್ಧಿಯಾನಂದದ ಶಿವರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಚಿತ್ತ ಚಿನ್ನವಾಗಿ ಮನವು ತಾ ಮುತ್ತಾಗಿ
ಬುದ್ಧಿ ಶುದ್ಧವಿರೆ ನೀಬರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕನಸು ಮನಸುಗಳಲಿ ನೀನೆ ತುಂಬಿರುವಾಗ
ಅನ್ಯವ ನೆನೆದು ನಾ ನರಳೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ





## ಒಳಗಣ್ಣು

**ದೇ**ಶಕ್ಕೆ ಸ್ವಾತಂತ್ರ್ಯ ಬಂತು. ಆತ್ಮಗೌರವ ಬಂತು. ಅದಕ್ಕಾಗಿ ತೆತ್ತ ಬೆಲೆ ಲೆಕ್ಕಕ್ಕೆ ಸಿಗದಷ್ಟು. ತಲೆಯೆತ್ತಿ ಜಗದೆದುರು ನಿಲ್ಲುವಂತಾಯ್ತು. ನಡೆಯುವಂತಾಯ್ತು. ನುಡಿಯುವಂತಾಯ್ತು. ಭಾಗ್ಯೋದಯದ ಬೆಳ್ಳಂಬೆಳಕು ಎಲ್ಲೆಡೆಗೆ ಹರಿಯಿತು. ಶತಶತಮಾನಗಳ ಕತ್ತಲೆ ಹರಿಯಿತು. ಇದೇನು ಸಾಮಾನ್ಯವಾದುದಲ್ಲ. ಭಾರತೀಯರು ಸದಾ ಸ್ಮರಿಸಬೇಕಾದ ಮಹಾಪುಣ್ಯ. ಆದರೆ ನಾವೆಲ್ಲ ಎಚ್ಚರದಿಂದ ಮುನ್ನಡೆಯಬೇಕಾದ ಕಾಲ ಇದಾಗಿದೆ ಎಂಬುದನ್ನು ಮರೆಯುವಂತಿಲ್ಲ. ನಮ್ಮ ಶತ್ರುಗಳು ಒಳ-ಹೊರಗೆ ನಿರಂತರ ಕಾದು ನೋಡುತ್ತಿದ್ದಾರೆ. ನಮ್ಮ ನಮ್ಮಲ್ಲಿರುವ ಪ್ರಾಂತ ಭೇದ, ಭಾಷಾ ಭೇದ, ಧರ್ಮ ಭೇದ, ವರ್ಣಭೇದ, ಸ್ಪೃಶ್ಯ-ಅಸ್ಪೃಶ್ಯ ಭೇದಗಳೆಂಬ ಶತ್ರುಗಳು ದಿನದಿನಕ್ಕೂ ಭಯೋತ್ಪಾದಕತೆಯ ಭಯಂಕರತೆಯನ್ನು ಸೃಷ್ಟಿಸುತ್ತಿದ್ದಾರೆ. ನಾವೆಲ್ಲ ತಾಯಿ-ಭಾರತಿಯ ಶಿವಸಂತಾನವೆಂಬುದನ್ನು ಅಲಕ್ಷಿಸುತ್ತಿರುವುದನ್ನು ಕಾಣುವಂತಾಗಿದೆ. ಇವರೆಲ್ಲ ಹೊರಗಿನ ಶತ್ರುಗಳಾದರೆ ಒಳಗಿನ ಶತ್ರು ಇನ್ನೂ ದಾರುಣವಾಗಿದ್ದಾನೆ. ಅವನು ಯಾರೆಂದರೆ 'ಅಜ್ಞಾನ' ಮತ್ತು 'ಆಲಸ್ಯ' ವಾಗಿದೆ. ನಮ್ಮ ಪರಂಪರೆಯನ್ನು ಆಧ್ಯಾತ್ಮಿಕ ಔನ್ನತ್ಯ ಶಿವಶಿಖರಗಳನ್ನು ಏರಲಾರದೆ ಹೆಳವರಾಗುತ್ತಿದ್ದೇವೆ. ಲೌಕಿಕ ಪ್ರಗತಿಯೇ ಮಹಾಜ್ಞಾನ-ಸಾಧನೆಯೆಂಬ ಭಾವಭ್ರಮೆಯಲ್ಲಿ ಒಳಗಣ್ಣನ್ನು ಮುಚ್ಚಿದ್ದೇವೆ. ಸೋಮಾರಿತನದ ಸ್ಪರ್ಧೆಯಲ್ಲಿ ಮುಂದಿದ್ದೇವೆ. ಕ್ರಿಯಾಶೀಲತೆಯೇ ನಿಜವಾದ ಬೆಳವಣಿಗೆ ಎಂಬುದನ್ನು ಗಮನಿಸಲಾರದಾಗಿದ್ದೇವೆ. ಹೌದು, ಇಂದಿಲ್ಲಿ ವಸ್ತುಪ್ರದರ್ಶನ ಉದ್ಘಾಟಿತವಾಗುತ್ತಿದೆ. ಸಂತೋಷ. ಆದರೆ ನಾವೆಲ್ಲ ಗಮನಿಸಬೇಕು ಪ್ರತಿನಿತ್ಯ, ಪ್ರತಿಕ್ಷಣ ದಯಾಮಯನಾದ ಪರಶಿವನ ಸೃಷ್ಟಿಯ ಭವ್ಯ-ದಿವ್ಯ ಪ್ರಕೃತಿಯ ವಸ್ತುಪ್ರದರ್ಶನ ಉದ್ಘಾಟಿತವಾಗುತ್ತಿರುವುದನ್ನು ಕಾಣುವುದಾಗಬೇಕು, ಅನುಭವಿಸುದಾಗಬೇಕು. 'ಆನಂದಮಯ ಈ ಜಗಹೃದಯ' ಎಂಬುದನ್ನು ಅರಿತು ಪರಿಭಾವಿಸುವುದಾಗಬೇಕು.

☆

# ಸಂಪಾದಕೀಯ

## ವಿವೇಚನೆ

ಪ್ರಜಾಪ್ರಭುತ್ವ, ಚುನಾವಣೆಗಳು, ನಮ್ಮನ್ನು ನಾವೇ ಆಳಿಕೊಳ್ಳಲು ರೂಪಿಸಿಕೊಂಡ ತಂತ್ರ, ತಂತ್ರ ತೂಕ ತಪ್ಪಿದರೆ ಜನತಂತ್ರ ಅತಂತ್ರ, ಪ್ರಭುವಿಗೆ ದೂರದರ್ಶಿತ್ವವಿರಬೇಕು. ಜನಸುಖದಲ್ಲಿ ತನ್ನ ಸುಖವಿದೆ ಎಂಬುದರ ಅರಿವಿರಬೇಕು. ವಿವೇಕ, ವಿವೇಚನೆ, ಮಾನವೀಯತೆಯಗಳತ್ತ ತನ್ನ ದೃಷ್ಟಿಯಿರಬೇಕು. ಪ್ರಜೆ ಪ್ರಭುವಾಗುವುದೆಂದರೆ ಚುನಾಯಿಸಬೇಕಾದ ತನ್ನ ಪ್ರತಿನಿಧಿಯ ಒಳಹೊರಗನ್ನು ತಿಳಿದಿರಬೇಕು. ಪ್ರತಿನಿಧಿಯನ್ನು ಆರಿಸುವಾಗ 'ಶಸ್ತ್ರಚಿಕಿತ್ಸೆ ಮಾಡುವ ವೈದ್ಯ' ನಾಗಿರಬೇಕು. ಮೋಹಮುಕ್ತನಾಗಿರಬೇಕು. ಭಾವಭ್ರಮೆಯಿಂದ ಹೊರ ಬರಬೇಕು. ಬಂಧು, ಬಾಂಧವ, ಜಾತಿ, ಪಕ್ಷ, ಭಾಷೆಗಳಿಂದ ದೂರ ನಿಲ್ಲಬೇಕು. ತನ್ನ ಏಳಿಗೆ ತಾನಾರಿಸುವ ಪ್ರತಿನಿಧಿಯಿಂದ ಎಷ್ಟು ಸಾಧ್ಯ ಎಂಬ ತಿಳುವಳಿಕೆ ತಂದುಕೊಳ್ಳುವುದಾಗಬೇಕು. ಹಣ, ಹೆಂಡ, ಹೆಣ್ಣು ಪ್ರಲೋಭನೆಗಳನ್ನು ನಿರ್ದಾಕ್ಷಿಣ್ಯವಾಗಿ ವಿರೋಧಿಸುವ ಪ್ರಮಾಣ ವಚನವನ್ನು ತನಗೆ ತಾನೇ ಮಾಡಿಕೊಳ್ಳಬೇಕು. 'ಹಸುರನೆನ್ನ ಮುಂದೆ ಪಸರಿಸದಿರಯ್ಯಾ' ಎಂಬ ಪ್ರಾರ್ಥನೆ ಮಾಡಬೇಕು. 'ಸೂಜಿಕೊಟ್ಟು ದಬ್ಬಳ ತೆಗೆವವರನ್ನು' ಹತ್ತಿರ ಬರಗೊಡದಂತೆ ನಿಶ್ಚಲ ಮನಸ್ಸನ್ನುಳ್ಳವರಾಗಬೇಕು. 'ಹಬ್ಬಕ್ಕೆ ತಂದ ಹರಕೆಯ ಕುರಿ'ಗಳಾಗಬಾರದು. ಪ್ರತಿನಿಧಿಗಳನ್ನು ಚುನಾಯಿಸುವಾಗ 'ಮನಃಸಾಕ್ಷಿ'ಯನ್ನು ಮರೆಯಬಾರದು. ಮರದ ಮೇಲೆ ಕುಳಿತು ಮರದ ಬುಡ ಕಡಿಯುವ ಜಾಣರಾಗಬಾರದು. 'ಬೇವಿನ ಬೀಜವ ಬಿತ್ತಿ ಬೆಲ್ಲದ ಕಟ್ಟೆಯಕಟ್ಟಿ ಆಕಳ ಹಾಲನ್ನೆರದು ಜೇನುತುಪ್ಪವ ಹೊಯ್ದು ಸುರಕ್ಷಿತವ ಮಾಡಿದರೆ– ಕಹಿಯಲ್ಲದೆ ಸಿಹಿಯಾಗಬಲ್ಲುದೆ ?' ಎಂಬ ಬಸವವಾಣಿಯನ್ನು ಮರೆಯಬಾರದು.

ಚುನಾವಣೆ ಬರುತ್ತಿದೆ. ಪಕ್ಷಗಳು ಸಿದ್ಧತೆ ನಡೆಸಿವೆ. ಪ್ರಣಾಳಿಕೆಗಳನ್ನು ಬಿಡುಗಡೆ ಮಾಡುತ್ತಿವೆ. ಆಶ್ವಾಸನೆಗಳ ಅಮೃತವನ್ನುಣಿಸಲು ಹವಣಿಸುತ್ತಿವೆ. ನೆಲ, ಜಲ, ನುಡಿಗಳಭಿಮಾನವಿಲ್ಲ. ಕೇವಲ ತಾವು ವೆಚ್ಚ ಮಾಡಿದ, ಹಣವನ್ನು ಶತಾಧಿಕವಾಗಿ ಮರುಗಳಿಸುವ ಉದ್ಯೋಗವನ್ನಾಗಿಸಿ ಬಿಟ್ಟಿವೆ. ನಿನ್ನೆ ಮೊನ್ನೆ ಕಡುಬಡವರಾಗಿದ್ದವರು ರಾಜಕಾರಣಿಗಳಾಗಿ ಕೋಟ್ಯಾಧಿಪತಿಗಳಾಗುತ್ತಿದ್ದಾರೆ. ವಂಶಪಾರಂಪರ್ಯ ಉದ್ಯೋಗವನ್ನಾರಂಭಿಸಿದ್ದಾರೆ. ಪ್ರತಿನಿಧಿಯಾದ ವ್ಯಕ್ತಿ ದಿವಂಗತನಾದರೆ ಅವನ ಹೆಂಡತಿಯೋ, ಮಗನೋ, ಮಗಳೋ ಚುನಾಯಿತನಾಗುವ ವ್ಯವಸ್ಥೆಯ ಕೆಟ್ಟ ಸಂಪ್ರದಾಯ ಸಂಸ್ಕೃತಿ ಬೆಳೆದು ಬಿಟ್ಟಿದೆ. ಇಂದು ರಾಜಕೀಯ ಕ್ಷೇತ್ರ ಸೇವಾ ಕ್ಷೇತ್ರವಾಗಿ ಉಳಿದಿಲ್ಲ. ಸಂಪತ್ತುಗಳಿಸುವ, ಸಂಗ್ರಹಿಸುವ, ಉದ್ಯೋಗವಾಗಿ ಮಾರ್ಪಟ್ಟಿದೆ. 'ಬೇಲಿಯೇ ಎದ್ದು ಹೊಲ ಮೇಯಲಾರಂಭಿಸಿದೆ'. ಇದಕ್ಕೆಲ್ಲ ಪರಿಹಾರವಿಲ್ಲವೆಂದಲ್ಲ, ಇದೆ. ಅದೇ 'ಸತ್ಯ ಶುದ್ಧ ಪ್ರಾಮಾಣಿಕ ನಿಸ್ವಾರ್ಥ ಸೇವಾಶೀಲ'ರನ್ನು ಜನಪ್ರತಿನಿಧಿಗಳನ್ನಾಗಿ ಚುನಾಯಿಸುವ ರಾಜಮಾರ್ಗ. ನಿಜವಾದ ಅರ್ಥದಲ್ಲಿ ಪ್ರಜೆ–ಪ್ರಭುವಾಗಬೇಕು ತನ್ನ ಸೇವಾಸ್ನೇಹಿತನನ್ನು ಆರಿಸುವಾಗ.

ಮುಂಬರುವ ಚುನಾವಣೆಯಲ್ಲಿ ಪ್ರತಿಪ್ರಜೆಯೂ ವಿವೇಚನೆಯಿಂದ ತನ್ನ ಪ್ರತಿನಿಧಿಯನ್ನು ಆಯ್ಕೆ ಮಾಡುವಂತಾಗಲಿ ಎಂದು 'ಸಿದ್ಧಗಂಗಾ' ಆಶಿಸುತ್ತದೆ.

–. ಸಂಪಾದಕ



# ವೈಜ್ಞಾನಿಕ ಚಿಂತನೆ

## ಬಸವಣ್ಣನವರ ಹಾಗೂ ಅಕ್ಕಮಹಾದೇವಿಯವರ ವಚನಗಳಲ್ಲಿ ವೈಜ್ಞಾನಿಕ ಅಂಶಗಳು

### ಭೂಲೋಕದ ಚಟುವಟಿಕೆಗಳ ಶಕ್ತಿಗೇ ರವಿಯೇ ಮೂಲ ಎಂಬ ಹೇಳಿಕೆ

–ಡಾ|| ವ್ಹಿ.ವ್ಹಿ. ಬಾಗಲಕೋಟಿ, ವಿಶ್ವಚೇತನ ಪ್ರಕಾಶನ, ಕಲ್ಯಾಣ್ ಹೌಸಿಂಗ ಕಾಲೋನಿ, ಗೋಕಾಕ–೫೯೧೩೦೭.

ಮಹಾದೇವಿ ಅಕ್ಕನ ಒಂದು ಬಹುಶೃತ ವಚನವು ಹೀಗಿದೆ–

ಲೋಕದ ಚೇಷ್ಟೆಗೆ ರವಿ ಬೀಜವಾದಂತೆ,<br>
ಕರಣಂಗಳ ಚೇಷ್ಟೆಗೆ ಮನವೇ ಬೀಜ ;<br>
ಎನಗುಳ್ಳದೊಂದು ಮನ,<br>
ಆ ಮನ ನಿಮ್ಮಲ್ಲಿ ಸಿಲುಕಿದ ಬಳಿಕ,<br>
ಎನಗೆ ಭವವುಂಟೇ ಚೆನ್ನಮಲ್ಲಿಕಾರ್ಜುನಾ ?

ಸಾಮಾನ್ಯವಾಗಿ ಹಿಂದಿನ ವಚನಗಳಲ್ಲಿಯಂತೆ ಇಲ್ಲಿಯೂ ಎರಡು ಭಾಗಗಳನ್ನಾಗಿ ವಿಂಗಡಿಸಿ ಅಭ್ಯಸಿಸಬಹುದು.

'ಲೋಕದ ಚೇಷ್ಟೆಗೆ ರವಿ ಬೀಜವಾದಂತೆ<br>
ಕರಣಂಗಳ ಚೇಷ್ಟೆಗೆ ಮನವೇ ಬೀಜ'.

ಇದನ್ನು ಮೊದಲನೆಯ ಭಾಗವಾಗಿಯೂ ಮುಂದಿನದನ್ನು ಇನ್ನೊಂದು ಭಾಗವಾಗಿಯೂ ಪರಿಗಣಿಸಿದಾಗ, ಮೊದಲನೆ ಭಾಗದಲ್ಲಿ ಲೌಕಿಕ ವಿಚಾರವಿದ್ದು, ಬಹಿರಂಗಕ್ಕೆ ಸಂಬಂಧಿಸಿದ್ದಾಗಿರುತ್ತದೆ. ಇಲ್ಲಿಯ ಒಂದನೆಯ ಸಾಲಿನಲ್ಲಿ ವೈಜ್ಞಾನಿಕ ಅಂಶವೂ ಎರಡನೆಯ ಸಾಲಿನಲ್ಲಿ ಮನಶ್ಶಾಸ್ತ್ರದ ಒಂದು ನಿಯಮವು ಅಡಕವಾಗಿವೆ, ಉಳಿದದ್ದು ಆಧ್ಯಾತ್ಮಿಕ ಭಾಗವಾಗಿದೆ.

ಲೋಕದ ಚೇಷ್ಟೆಗೆ ರವಿ ಬೀಜವಾಗಿದೆ ಎಂಬುದರ ಅರ್ಥವನ್ನು, ಪ್ರತಿ ಸಾಮಾನ್ಯನೂ, ಪ್ರಾಥಮಿಕ ವಿಜ್ಞಾನ ವಿದ್ಯಾರ್ಥಿಯೂ ತಿಳಿದಿರುತ್ತಾರೆ. ಭೂಮಿಯ ಮೇಲಿನ ಪಶು ಪಕ್ಷಿ ಇತ್ಯಾದಿ ಮಾನವ ಸಹಿತ ಪ್ರಾಣಿಗಳು ಮತ್ತು ಸಸ್ಯಜೀವಿಗಳಿಗೂ ಅವಶ್ಯವಾದದ್ದು ಸೂರ್ಯನ ಬಿಸಿಲ ಶಕ್ತಿ. ಅವುಗಳ ಹುಟ್ಟು, ಜೀವನ ಸಾವಿಗಳೆಲ್ಲವುಗಳೂ, ಸೂರ್ಯನಿಂದ ಹೊರ ಬಂದ ಶಕ್ತಿಯನ್ನು ಅವಲಂಭಿಸಿವೆ. ಸಮುದ್ರದ ಮೇಲೆ ಮೋಡಗಳು ಹುಟ್ಟುವುದಕ್ಕೆ ಸೂರ್ಯನ ಬಿಸಿಲೇ ಬೇಕು. ಅಲ್ಲಿಂದ ಭೂಮಿಯ ವಿಶಾಲ ಭಾಗಗಳ ಮೇಲೆ ಮೋಡಗಳು ಚಲಿಸುವುದಕ್ಕೂ ಸೂರ್ಯನ ಬಿಸಿಲೇ ಕಾರಣ. ಬಿಸಿಲಿನಿಂದ ಸಮುದ್ರದ ನೀರಿನ ಮತ್ತು ಭೂಮಿಯ ಮೇಲ್ಭಾಗವೂ ಕಾಯ್ದರೂ, ನೀರಿನ ಉಷ್ಣತೆಯು, ಭೂಮಿಯ ಮೇಲ್ಮೈ ಉಷ್ಣತೆಗಿಂತ ಹಗಲು ಹೊತ್ತು ಕಡಿಮೆಯಾಗಿರುತ್ತದೆ. ಪರಿಣಾಮವಾಗಿ ಭೂಮಿಯ ಮೇಲೆ ಹೆಚ್ಚು ಕಾಯ್ದ ಹವೆಯು ಮೇಲಕ್ಕೇರಿ, ಸಮುದ್ರದ ಮೇಲಿನ ಹವೆಯು ಭೂಮಿಯ ಕಡೆಗೆ ಚಲಿಸಿ, ಗಾಳಿಗಳುಂಟಾಗಿ ಮೋಡಗಳ ಚಲನೆಗೆ ಕಾರಣವಾಗುತ್ತದೆ. ರಾತ್ರಿಯಲ್ಲಿಯ ಗಾಳಿಯ ಚಲನೆಯು ವಿರುದ್ಧ ದಿಕ್ಕಿನಲ್ಲಿ ರುತ್ತದೆ. ಇದು ಬೀಳುವುದಕ್ಕೆ ಕಾರಣವಾಗಿರುತ್ತದೆ. ಸೂರ್ಯ ಪ್ರಕಾಶವು ಸಸ್ಯಗಳ ಬೆಳವಣಿಗೆ ಕಾಲದಲ್ಲಿ ಹರಿತ್ತಿನ ತಯಾರಿಕೆಗೆ ಅವಶ್ಯವಾದದ್ದು ಹೀಗೆ ನೀರು, ಆಹಾರ, ವಸತಿ, ಔಷಧಿಗಳ ಪೂರೈಕೆಗೆ ರವಿಯೇ ಮೂಲ ಶಕ್ತಿಯಾಗಿರುವುದನ್ನು ಕಾಣುತ್ತೇವೆ.

ರವಿಯು ತನ್ನಲ್ಲಿ ಉತ್ಪಾದಿತವಾದ ಶಕ್ತಿಯನ್ನು ವಿಕಿರಣದ ಮೂಲಕ ಕಳೆದ 4.6 ಬಿಲಿಯನ್(ಸಹಸ್ರ ಲಕ್ಷ) ವರ್ಷಗಳಿಂದ, ಭೂಮಿಗೆ ಪೂರೈಸುತ್ತಲೇ ಇದೆ. ಇಷ್ಟಲ್ಲದೆ, ಇನ್ನೂ 4–5 ಬಿಲಿಯನ್ ವರ್ಷಗಳವರೆಗೆ ವಿಕಿರಣಗೊಳಿಸುತ್ತಲೇ ಇರುತ್ತದೆ ಎಂದು ವಿಜ್ಞಾನಿಗಳು ಲೆಕ್ಕ ಮಾಡಿದ್ದಾರೆ. ಜೀವಿಗಳ ಆಯುಷ್ಯ ದೃಷ್ಟಿಯಿಂದ ಇದು ಮಹಾನ್ ಕಾಲಾವಧಿ. ಕಾರಣ ಅಕ್ಕನ ಹೇಳಿಕೆ ನಿರಂತರ ಸತ್ಯವೆಂಬುದಕ್ಕೆ ಆಧಾರವಾಗಿದೆ.

ರವಿಯ ಉಪಮೆಯು ಇನ್ನೊಂದು ಮನೋ ವೈಜ್ಞಾನಿಕ ನಿಯಮದ ಹೇಳಿಕೆಗೆ ಆಧಾರವಾಗಿ ಉಪಯೋಗಿಸಲ್ಪಟ್ಟಿದೆ. ಅದು ದೇಹದ ಇಂದ್ರಿಯಗಳ ಚಟುವಟಿಕೆ ಅಥವಾ ಕಾರ್ಯಗಳಿಗೆ ಮನವೇ ಮೂಲ ಕಾರಣ ಎಂಬುದನ್ನು ಅಕ್ಕನು ಹೇಳಿ, ಮನಸ್ಸು ಕೈಕೊಂಡ ನಿರ್ಣಯ ನಿರ್ಧಾರದನುಗುಣವಾಗಿ ಇಂದ್ರಿಯಗಳ ಕಾರ್ಯ ವಿಧಾನ ಎಂಬುದನ್ನು ತಿಳಿಸಿದ್ದಾರೆ.

ವಚನದ ಎರಡನೇ ಭಾಗವು ಅಂತರಂಗಕ್ಕೆ ಸಂಬಂಧಿಸಿದ್ದು ಅದು–

'ಎನುಗುಳ್ಳದೊಂದು ಮನ<br>
ಆ ಮನವು ನಿಮ್ಮಲ್ಲಿ ಸಿಲುಕಿದ ಬಳಿಕ<br>
ನನಗೆ ಭವವುಂಟೇ ಚೆನ್ನಮಲ್ಲಿಕಾರ್ಜುನಾ'

ಇಲ್ಲಿಯದು, ಆಧ್ಯಾತ್ಮಿಕ ವಲಯದ್ದು ಅಕ್ಕನು ಒತ್ತು ಕೊಟ್ಟು ಹೇಳಬೇಕಾಗಿರುವ ಧರ್ಮದ ಅಂಗವಾಗಿರುವ ತತ್ವ.

ತನ್ನಲ್ಲಿರುವ ಮನವನ್ನು ಸಂಪೂರ್ಣವಾಗಿ ದೇವನಲ್ಲಿ ಸಿಲುಕಿಸಿ, ಮನದ ತುಂಬ ದೇವನೇ ಇದ್ದಾಗ, ಮನದಿಂದ ನಿಯಂತ್ರಿತವಾಗಿರಬೇಕಾದ ಇಂದ್ರಿಯಗಳಿಗೆ ಬೇರೆ ಆದೇಶಗಳಿಗೆ ಆಸ್ಪದವೆಲ್ಲಿ? ಭವದ, ಅಥವಾ ಸುತ್ತಲಿನ ಪರಿಸರ ಮತ್ತು ಪ್ರಪಂಚದ ಪರಿವೆಯೇ ಎನಗಿಲ್ಲ.

ಚಂಚಲವಾದ ಮನಸ್ಸನ್ನು ಆಶೆ ಅಮಿಷ ಮದ ಮತ್ಸರ ಅಹಂಕಾರ ಮಮಕಾರ ಇತ್ಯಾದಿ, ಮಾನವನ ವೈರಿಗಳನ್ನು ನಿಯಂತ್ರಿಸುವ ಮಾರ್ಗವಾದ, ಮನವನ್ನು ದೇವನಲ್ಲಿ ಸಿಲುಕಿಸುವ ವಿಧಾನವನ್ನು, ಸರಳ ಶಬ್ದಗಳಲ್ಲಿ ಹೇಳಿದ್ದಾರೆ ಶರಣೆ ಮಹಾದೇವಿಯವರು.

–ಮುಂದುವರೆಯುತ್ತದೆ.

## ಪೂರ್ವಸಿದ್ಧತೆ

ಪೂರ್ವ ಸಿದ್ಧತೆಯಿಂದ ಮಾಡಿದ ಕಾರ್ಯ ಯಶಸ್ವಿಯಾಗುವುದು ನಿಶ್ಚಿತ. ನಾಳೆ ಮಾಡುವ ತಿಂಡಿಗೆ, ಅಡುಗೆಗೆ ಮಾತೆಯರು ಇಂದೇ ಸಿದ್ಧತೆ ಮಾಡಿಕೊಳ್ಳುತ್ತಾರೆ. ಹಬ್ಬ, ಮದುವೆ, ಮನೆ ಕಟ್ಟುವುದು ಇವುಗಳಿಗೆಲ್ಲ ಪೂರ್ವ ಸಿದ್ಧತೆ ಅವಶ್ಯಕವೂ, ಅನಿವಾರ್ಯವೂ ಹೌದು.

ಭಾಷಣಕಾರರಿಗೆ, ಮಂತ್ರಿ ಮಹೋದಯರಿಗೆ ಪೂರ್ವ ಸಿದ್ಧತೆ ಬೇಡವೇ? ಖಂಡಿತ ಬೇಕು. ತಮ್ಮ ಉಪನ್ಯಾಸ ಜನ ಮನದಲ್ಲಿ ಸ್ಥಿರಸ್ಥಾಯಿಯಾಗಿ ಉಳಿಯಬೇಕಾದರೆ ಮಾತನಾಡುವ ಸಂದರ್ಭ, ಎದುರಿಗೆ ಕುಳಿತಿರುವ ಜನ ಸ್ತೋಮ ಇವುಗಳ ಬಗ್ಗೆ ಮೊದಲೇ ಚಿಂತನೆ ಮಾಡಿರಬೇಕಾಗುತ್ತದೆ.

ವಿಶ್ವೇಶ್ವರಯ್ಯನವರು ತಾವು ಓದಿದ್ದ ಮುದ್ದೇನಹಳ್ಳಿಯ ಪ್ರಾಥಮಿಕ ಶಾಲೆಗೆ ಒಮ್ಮೆ ಹೋಗಿದ್ದರು. ಗುರುಗಳು ಮಕ್ಕಳಿಗೆ ನಾಲ್ಕು ಹಿತವಚನ ಹೇಳಲು ಪ್ರಾರ್ಥಿಸಿದರು. ಅದರಂತೆ ಮಾತ ನಾಡಿದರು. ಆದರೆ ವಿಶ್ವೇಶ್ವರಯ್ಯನವರಿಗೆ ತಾವು ಮಾಡಿದ್ದು ಪೂರ್ವ ಸಿದ್ಧತೆಯಿಲ್ಲದ ಭಾಷಣ ಎಂದು ತಿಳಿದಿತ್ತು. ಇದು ಅಪರಾಧ ಎಂದು ಭಾವಿಸಿ ಮತ್ತೆ ಸಿದ್ಧತೆಯೊಡನೆ ಶಾಲೆಗೆ ಹೋಗಿ ಭಾಷಣ ಮಾಡಿದರು. ವಿಶ್ವೇಶ್ವರಯ್ಯನವರು ಪೂರ್ವ ಸಿದ್ಧತೆಯಿಲ್ಲದೆ ಯಾವ ಕೆಲಸವನ್ನು ಮಾಡುತ್ತಿರಲಿಲ್ಲ. ಆ ಕಾರಣಕ್ಕಾಗಿ ವಿಶ್ವವಿಖ್ಯಾತ ಇಂಜಿನಿಯರಾದರು.

ಯಶಸ್ವಿ ಶಿಕ್ಷಕರಾಗಲು ಪೂರ್ವಸಿದ್ಧತೆಯೊಡನೆ ಕೊಠಡಿಗೆ ಹೋಗಬೇಕು. ಮಕ್ಕಳು ಕೇಳುವ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ನೀಡಬೇಕಾದರೆ ತಾವು ಮಾಡುವ ಪಾಠದ ಬಗ್ಗೆ ಪೂರ್ವ ಚಿಂತನೆ ಬೇಕಾಗುತ್ತದೆ. ಇದರಿಂದ ಗುರುಗಳ ಗೌರವ ಹೆಚ್ಚುತ್ತದೆ.

ನಮ್ಮ ರೈತರು ಹೊಲಗದ್ದೆಗಳಿಗೆ ಬಿತ್ತುವ ...ದಲು ಉಳುಮೆ ಮಾಡಿ, ಕಳೆಯನ್ನು ತೆಗೆದು ಸಿದ್ಧಪಡಿಸಿಕೊಳ್ಳುತ್ತಾರೆ. ಸಂತೆಯ ಹೊತ್ತಿಗೆ ಮ... ಮೊಳ ನೇಯ್ದ ಬಟ್ಟೆಗೆ ಮಾರುಕಟ್ಟೆಯಲ್ಲಿ ಬೆಲೆ ಕಡಿಮೆ. ಕೀಳು ಗುಣಮಟ್ಟದ್ದಾಗಿರುವುದರಿಂದ ಜನತೆ ಕೊಳ್ಳಲು ... ಮುಂದೆ ನೋಡುತ್ತಾರೆ. ಭಾಷಣಕ್ಕೂ ಸಿದ್ಧತೆ ಯಿಲ್ಲದಿದ್ದರೆ, ಅದು ಜನ ಸಮುದಾಯವನ್ನು ಮುಟ್ಟುವು ದಿಲ್ಲ, ತಟ್ಟುವುದಿಲ್ಲ, ಭಾಷಣಕಾರರ ವ್ಯಕ್ತಿತ್ವಕ್ಕೂ ಕುತ್ತು ತರುತ್ತದೆ. ಪೂರ್ವಸಿದ್ಧತೆ ಆತ್ಮವಿಶ್ವಾಸವನ್ನು ತಂದು ಕೊಡುತ್ತದೆ.

ಆಚಾರ್ಯ, ಕನ್ನಡದ ಕಣ್ವ ಬಿ.ಎಂ. ಶ್ರೀಕಂಠಯ್ಯನವರು ಉದ್ದಾಮ ಪಂಡಿತರು, ವಾಗ್ಮಿಗಳು, ಚಿಂತಕರು, ಕನ್ನಡ ಸಾಹಿತ್ಯ, ಸಂಸ್ಕೃತಿಗಳನ್ನು ಕರತಲಾಮಲಕ ಮಾಡಿಕೊಂಡವರು. ಯಾವ ವಿಷಯವನ್ನು ಕೊಟ್ಟರು ತಕ್ಷಣ ವಿಚಾರಪೂರ್ಣ ಭಾಷಣ ಮಾಡುವುದರಲ್ಲಿ ನಿಷ್ಣಾತರಾಗಿದ್ದರೂ, ಎಂದೂ ಅವರು ಪೂರ್ವಸಿದ್ಧತೆಯಿಲ್ಲದೆ ಮಾತನಾಡುತ್ತಿರಲಿಲ್ಲ. ಬಸ್ಸು, ರೈಲಿನಲ್ಲಿ ಪ್ರಯಾಣ ಮಾಡುತ್ತಲೇ, ವಿಷಯಕ್ಕೆ ಸಂಬಂಧಿಸಿದ ಪುಸ್ತಕ ಗಳನ್ನು ಓದುತ್ತಾ, ಟಿಪ್ಪಣಿ ಮಾಡಿಕೊಳ್ಳುತ್ತಿದ್ದರು. ಆದುದರಿಂದಲೇ ಶ್ರೀಯವರ ಭಾಷಣ ಸತ್ವಪೂರ್ಣವೂ, ವಿದ್ವತ್ಪೂರ್ಣವೂ ಆಗಿರುತ್ತಿತ್ತು. ನಮ್ಮ ಯುವಕರು ಪರೀಕ್ಷೆಗೆ ಮೊದಲು ಪೂರ್ವಸಿದ್ಧತೆ ಮಾಡಿಕೊಳ್ಳ ಬೇಡವೇ?

ಪೂರ್ವಸಿದ್ಧತೆಯನ್ನು ಪರೀಕ್ಷೆಯ ಹಿಂದಿನ ದಿನ ಮಾಡಿಕೊಳ್ಳುವುದಲ್ಲ. ವರ್ಷದ ಆರಂಭದಿಂದಲೇ ಪ್ರಾರಂಭಿಸಬೇಕು. ಕ್ರಮವಾಗಿ ಎಲ್ಲಾ ವಿಷಯಗಳಿಗೂ ಗಮನ ಕೊಡಬೇಕು. ವಿದ್ಯಾರ್ಥಿಗಳು ಸುಲಭ ವಿಷಯಗಳಿಗೆ ಮಹತ್ವ ನೀಡಿ, ಕ್ಲಿಷ್ಟ ವಿಷಯಗಳನ್ನು ಕೈಬಿಡುತ್ತಾರೆ.

ಕನ್ನಡದಲ್ಲಿ ಅಂಕ ಕೊಡುವುದಿಲ್ಲ. ಬಹಳ ಹಿಡಿಯುತ್ತಾರೆ ಎನ್ನುವ ಆರೋಪ ಮಕ್ಕಳಲ್ಲೂ ಪೋಷಕರಲ್ಲಿ ಇರುವುದು ಸರಿಯಲ್ಲ. ಮಕ್ಕಳ ಮಾತೃಭಾಷೆ ಸುಲಭ, ಕೊನೆಗೆ ಓದಿಕೊಂಡರೆ ಸಾಕೆಂದು ಮೊದಲಿ ನಿಂದಲೂ ಉದಾಸೀನ ಮಾಡುತ್ತಾರೆ.

ಕನ್ನಡ ಪ್ರಶ್ನೆಪತ್ರಿಕೆಯಲ್ಲಿ ಶೇ.೨೫ ರಷ್ಟು ಅಂಕಗಳನ್ನು ವ್ಯಾಕರಣ, ಅಲಂಕಾರ, ಛಂದಸ್ಸು, ಪ್ರಬಂಧ, ಪತ್ರ ಲೇಖನಕ್ಕೆ ಇಟ್ಟಿರುತ್ತಾರೆ. ವಿದ್ಯಾರ್ಥಿಗಳು ವ್ಯಾಕರಣ ಕಷ್ಟವೆಂದು ಕೈಕಟ್ಟಿ ಕುಳಿತು, ಪರೀಕ್ಷೆ ಹತ್ತಿರ ಬಂದಾಗಲೇ ತಲೆ ಕೆಡಿಸಿಕೊಳ್ಳುತ್ತಾರೆ. ಮೊದಲಿನಿಂದ ಪೂರ್ವ ಸಿದ್ಧತೆ ಮಾಡಿಕೊಳ್ಳುವುದಿಲ್ಲ.

ವಿದ್ಯಾರ್ಥಿಗಳು ತಿಳಿದಂತೆ ಈ ವಿಭಾಗಗಳು ಕಷ್ಟವಲ್ಲ. ...ತಿ ಸರಳ, ಸುಲಭ. ಸ್ವಲ್ಪ ಪ್ರಯತ್ನ ಮಾಡಿದರೆ, ಗುರುಗಳ, ...ಯರ ಸಲಹೆ, ಸಹಕಾರ ಪಡೆದರೆ ಖಂಡಿತ ವ್ಯಾಕರಣ ಕಷ್ಟವಲ್ಲ. ಇದು ಒಂದು ವಿಜ್ಞಾನ ಮನಸ್ಸಿದ್ದರೆ ಮಾರ್ಗ. ಪೂರ್ವ ಸಿದ್ಧತೆ ಮಾಡಿಕೊಂಡರೆ ಕನ್ನಡದಲ್ಲಿ ಅಂಕಗಳಿಸುವುದು ಸರಳ ಸುಲಭ. ಎಲ್ಲಾ ಕ್ಷೇತ್ರಗಳ ಯಶಸ್ಸಿನ ಗುಟ್ಟು ಪ್ರಯತ್ನ ಹಾಗೂ ಪೂರ್ವಸಿದ್ಧತೆ.

-ಕೆ.ಎನ್. ಸ್ವಾಮಿ, ದಾವಣಗೆರೆ.





ಇದು ರಾಷ್ಟ್ರಕವಿ ಕುವೆಂಪು ಅವರು ಯುಗಾದಿಯ ಮೂಲಕ ಜನತೆಗೆ ನೀಡಿರುವ ಸಂದೇಶ. ಬೇವು ಕಹಿ ನಿಜ; ಆದರೆ ಅದು ಅದರಕ್ಕೆ ಕಹಿ ಉದರಕ್ಕೆ ಸಿಹಿ. ಬೆಲ್ಲದ ಸವಿಯ ಅನುಭವವಾಗಬೇಕಾದರೆ ಬೇವಿನ ಕಹಿಯ ಅನುಭವ ಬೇಕು. ಯುಗಾದಿಯಲ್ಲಿ ಬೇವೂ ಉಂಟು, ಬೆಲ್ಲವೂ ಉಂಟು. ಈ ಕಾರಣದಿಂದಲೇ ಈ ಹಬ್ಬ ಸಮನ್ವಯಕ್ಕೆ ಸಂಕೇತವಾಗಿದೆ.

ಆದರೆ ಇಂದು ಪರಿಸ್ಥಿತಿ ಬದಲಾಗಿದೆ. ತನ್ನ ಜೀವನಾವಶ್ಯಕತೆಗಳನ್ನು ತಾನೇ ಪೂರೈಸಿಕೊಳ್ಳುತ್ತಿದ್ದ ಮಾನವ ಇಂದು ಪರಾವಲಂಬಿಯಾಗಿದ್ದಾನೆ. ಅತಿಯಾದ ನಾಗರೀಕತೆಯ ಬೆಳವಣಿಗೆ, ವಿಜ್ಞಾನದ ಆವಿಷ್ಕಾರ ಅವನಿಗೆ ಅನುಕೂಲಗಳೊಂದಿಗೇ ಪ್ರತಿಕೂಲವನ್ನೂ ಒಡ್ಡುತ್ತಿವೆ. ಉನ್ನತ ಆದರ್ಶವನ್ನಿಟ್ಟುಕೊಂಡು ಸಂತೋಷದಿಂದ ಆಚರಿಸುತ್ತಿದ್ದ ಹಬ್ಬಗಳು ಇಂದು ಕೇವಲ ಕಾಟಾಚಾರಕ್ಕಾಗಿ ಆಚರಿಸಲ್ಪಡುತ್ತಿದ್ದು ಮೂಲ ಆಶಯಕ್ಕೆ ಭಂಗ ತಂದುಕೊಂಡಿದೆ. ಜಾಗತೀಕರಣ, ಕೈಗಾರೀಕರಣ, ಖಾಸಗೀಕರಣಗಳ ಹೊಡೆತದಿಂದಾಗಿ ಮಾನವ ಸಂಬಂಧಗಳು ಶಿಥಿಲಗೊಳ್ಳುತ್ತಿರುವುದು ಮಾತ್ರವಲ್ಲ; ಸ್ವಾರ್ಥಪರನಾದ ಮಾನವರ ದುರಾಸೆಯಿಂದಾಗಿ ಹಬ್ಬಗಳಲ್ಲಿ ಸಾಮೂಹಿಕ ಭಾಗವಹಿಸುವಿಕೆ ದೂರವಾಗುತ್ತಿದೆ. ರಾಜಕೀಯ ಅಸ್ಥಿರತೆ ಕೋಮುವಾದ, ಮೇಲೇರಿದ ಭ್ರಷ್ಟಾಚಾರದಿಂದಾಗಿ ಸಮಾಜ ಅಶಾಂತಿಯ ತಾಣವಾಗಿ ಜಾತಿ-ಮತಗಳ ನಡುವೆ ಸಂಘರ್ಷಕ್ಕೆ ಕಾರಣವಾಗಿದೆ. ದುಡಿಯುವ ಕೈಗಳಿಗೆ ಕೆಲಸವಿಲ್ಲ ಮಾತ್ರವಲ್ಲ, ದುಡಿಯುವ ದುಡಿಸಿಕೊಳ್ಳುವ ವರ್ಗಗಳ ನಡುವೆ ಉಂಟಾಗಿರುವ ಕಂದಕದಿಂದಾಗಿ ವರ್ಗಸಂಘರ್ಷಕ್ಕೆ ಕಾರಣವಾಗಿದೆ. ಬಡತನ ನಿರುದ್ಯೋಗದ ಕಾರಣದಿಂದಾಗಿ ಯುವಜನತೆ ಬದುಕಿನಲ್ಲಿ ಅಡ್ಡಾದಿಡ್ಡಿ ತುಳಿಯುವ ಸಂದರ್ಭಗಳು ಹೆಚ್ಚಾಗುತ್ತಿವೆ. ಉಳ್ಳವರು ಒಂದು ಕಡೆ ಐಷಾರಾಮ ಬದುಕು ಸಾಗಿಸಿದರೆ ಮತ್ತೊಂದು ಕಡೆ ತುತ್ತು ಅನ್ನಕ್ಕೆ ಕೈಚಾಚಬೇಕಾದ ಕಠೋರ ಸ್ಥಿತಿ ನಿರ್ಮಾಣವಾಗಿದೆ.

ಇಂಥ ಪ್ರಕ್ಷುಬ್ಧ ಸಂದರ್ಭದಲ್ಲಿ ಮತ್ತೆ ಬಂದಿರುವ ಯುಗಾದಿ ಎಲ್ಲರಿಗೆ ವಿವೇಕ ತರಲಿ, ಎಲ್ಲರಿಗೂ ಸಮೃದ್ಧಿ ತರಲಿ. ಎಲ್ಲರ ಬದುಕಿನಲ್ಲಿ ವಸಂತೋದಯವಾಗಲಿ. ಸರ್ವೋದಯಕ್ಕೆ ಈ ಸಲದ ಯುಗಾದಿ ನಾಂದಿಯಾಗಲಿ, 'ಅಸುರೀ ಶಕ್ತಿಗೆ ಪ್ರತಿಭಟನಾ ರೂಪದಲ್ಲಿ ಯುಗಾದಿ ಸಾತ್ವಿಕ ಶಕ್ತಿಯಾಗಿರುವುದು ಯುಗಾದಿಯ ವೈಶಿಷ್ಟ್ಯ'.

☆

### 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

'ಸಿದ್ಧಗಂಗಾ' ಮುನ್ನಡೆಗೆ ಇರುವ ಆರ್ಥಿಕ ಪರಿಸ್ಥಿತಿಯನ್ನು ನಿಮ್ಮ ಗಮನಕ್ಕೆ ನಿವೇದಿಸಿಕೊಳ್ಳಲಾಗುತ್ತಿದೆ. ಈ ಸಮಸ್ಯೆಯನ್ನು ಅರಿತು ಆಜೀವ ಸದಸ್ಯರು ಮುಂದಾಗಿ ಹೆಚ್ಚುವರಿ ಚಂದಾ ೫೦೦ ರೂ. /೪೦೦ ರೂ. ಉದಾರತೆಯಿಂದ ಸಂದಾಯ ಮಾಡುತ್ತಿದ್ದಾರೆ. ಅವರಿಗೆ ಶ್ರೀಮಠದ ಪರವಾಗಿ ಧನ್ಯವಾದಗಳು.

ಸಂದಾಯ ಮಾಡದೆ ಇರುವವರಲ್ಲಿ ನಮ್ರ ವಿನಂತಿ ಪ್ರಸ್ತುತವಿರುವ ಆಜೀವ ಚಂದಾ ೧೦೦೦/- ರೂ.ಗೆ. ಸರಿಹೊಂದುವಂತೆ ಉಳಿಕೆ ೫೦೦/- ರೂ./ ೪೦೦/- ರೂ. ಶೀಘ್ರವಾಗಿ ಸಂದಾಯ ಮಾಡಿ 'ಸಿದ್ಧಗಂಗಾ' ಆತಂಕವಿಲ್ಲದೆ ಮುನ್ನಡೆಯಲು ಹರಸಿ ಹಾರೈಸಬೇಕಾಗಿ ಕೋರುತ್ತೇವೆ.

**ತಮ್ಮ ವಿಳಾಸದಲ್ಲಿರುವ LM ನಂಬರ್ ಸೂಚಿಸಿ** ಬಾಕಿ ಆಜೀವ ಚಂದಾವನ್ನು ನಗದು/ ಎಂ.ಒ/ ಚೆಕ್/ ಡಿ.ಡಿ. ಮೂಲಕ **'ಸಿದ್ಧಗಂಗಾ'** ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ದಯಮಾಡಿ ಕಳುಹಿಸಿ ವಿನಂತಿಸಿಕೊಳ್ಳುತ್ತೇನೆ.

**ಪ್ರಕಾಶಕರು**
**'ಸಿದ್ಧಗಂಗಾ'** ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.

### 'ಸಿದ್ಧಗಂಗಾ ಆಜೀವ ಸದಸ್ಯರಲ್ಲಿ ಮನವಿ

ನಿಮ್ಮ ವಿಳಾಸ ಬದಲಾದಾಗ ವಿಳಾಸದಲ್ಲಿರುವ ನಂಬರ್ ನಿಮ್ಮ ಆಜೀವ ಸದಸ್ಯ ತಪ್ಪದೆ ಸೂಚಿಸಿ. ಈ ಕೆಳಗಿನ ವಿಳಾಸಕ್ಕೆ ಪತ್ರ ಬರೆಯಿರಿ.

ಸಿದ್ಧಗಂಗಾ ಸಂಚಿಕೆ ರವಾನಿಸುವ ಕವರ್ ಮೇಲೆ ನಿಮ್ಮ ನಂಬರ್ ಇರುತ್ತದೆ. ನಂಬರ್ ನಮೂದಿಸುವುದನ್ನು ಮರೆಯಬೇಡಿ.

**ಪ್ರಕಾಶಕರು,**
ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಸಿದ್ಧಗಂಗಾಮಠ,
ತುಮಕೂರು- 572 104.

# ಪ್ರಜಾಪ್ರಭುತ್ವದ ತಾಯಿ : ಬಸವಣ್ಣ

-ರಂಜಾನ್ ದರ್ಗಾ, ಎಂ.ಎಫ್. ೪/೭, 'ಡಿ' ಬ್ಲಾಕ್, ನಂದಿನಿ ಲೇಔಟ್, ಬೆಂಗಳೂರು.

ನಮ್ಮ ನಮ್ಮ ದೇವರು ಮತ್ತು ಧರ್ಮಗಳು ನಮ್ಮೊಳಗೇ ಇರಬೇಕು. ಆದರೆ ನಾವು ಸಮಾಜದಲ್ಲಿ ಏಕೋಭಾವ ದೊಂದಿಗೇ ವ್ಯವಹರಿಸಬೇಕು. ಇದು ಪ್ರಜಾಪ್ರಭುತ್ವದ ಅತಿ ದೊಡ್ಡ ಆಶಯವಾಗಿದೆ. ಈ ಆಶಯಕ್ಕೆ ಇಂದಿಗೂ ಬೆಲೆ ಸಿಗದ ಕಾರಣ ಭಾರತ ಕೋಮುಗಲಭೆಗಳ ತಾಣವಾಗುತ್ತಿದೆ. ಬಾಬರಿ ಮಸೀದಿ ಮತ್ತು ರಾಮಜನ್ಮಭೂಮಿ ವಿವಾದ ಸಹಸ್ರಾರು ಮುಗ್ಧಜೀವಿಗಳ ಬಲಿ ತೆಗೆದುಕೊಂಡಿತು. ದೇಶದ ಜನತೆ ಹತ್ತಾರು ಸಹಸ್ರ ಕೋಟಿ ರೂಪಾಯಿಗಳಷ್ಟು ನಷ್ಟ ಅನುಭವಿಸಿತು. ಆದರೆ ಬಸವಣ್ಣನವರ ಪರಿಕಲ್ಪನೆಯ ಸಮಾಜದಲ್ಲಿ ದೇವಸ್ಥಾನಗಳೇ ಇಲ್ಲ! ಅಲ್ಲಿ ಏನಿದ್ದರೂ ಪ್ರಜಾಪ್ರಭುತ್ವವಾದಿ ನೆಲೆಯ ಚಿಂತನಮಂಥನಕ್ಕಾಗಿ ಬೇಕಾದ ಅನುಭವ ಮಂಟಪ. 'ಅನುಭವ ಮಂಟಪ' ಎಂಬುದು ವಿಶಿಷ್ಟವಾದ ಸಮಾಜೋ ಧಾರ್ಮಿಕ ಸಂಸತ್ ಆಗಿದೆ.

ಇಂದಿನ ಸಂವೈಧಾನಿಕ ಕಾನೂನಿನ ಮ್ಯಾಗ್ನಾಕಾರ್ಟಾ ಮೂಲ ಸೆಲೆಯಾಗಿದೆ. ರಾಜನ ಹಕ್ಕುಗಳಿಗೆ ಸಂಬಂಧಿಸಿದಂತೆ ಪೋಪ್, ದೊರೆ ಜಾನ್ ಮತ್ತು ಇಂಗ್ಲೆಂಡ್‌ನ ಕೆಳಹಂತದ ಜಹಗೀರದಾರ ಮಧ್ಯೆ ಭಿನ್ನಾಭಿಪ್ರಾಯ ಉಂಟಾದಾಗ ೧೨೧೫ ರಲ್ಲಿ ಒಂದು ಒಪ್ಪಂದಕ್ಕೆ ಬರಲಾಯಿತು. ಅದುವೆ ಮ್ಯಾಗ್ನಾ ಕಾರ್ಟಾ. ಅಂದರೆ ಮಹಾ ಒಪ್ಪಂದ ಈ ಒಪ್ಪಂದದಿಂದಾಗಿ ದೊರೆ ಜಾನ್ ಕೆಲವೊಂದು ಹಕ್ಕುಗಳನ್ನು ಬಿಟ್ಟುಕೊಡ ಬೇಕಾಯಿತು. ರಾಜನ ಬಯಕೆಗಳು ಕಾನೂನಿನ ಚೌಕಟ್ಟಿನೊಳಗೆ ಇರಬೇಕು ಮುಂತಾದ ಪ್ರಜಾಪ್ರಭುತ್ವವಾದಿ ಅಂಶಗಳು ಮ್ಯಾಗ್ನಾ ಕಾರ್ಟಾ ಒಪ್ಪಂದದಲ್ಲಿದೆ. ಹೀಗೆ ಕಾನೂನಿನ ಮೂಲಕ ರಾಜನ ಅಧಿಕಾರವನ್ನು ಮೊಟಕು ಗೊಳಿಸಿದ ಕೀರ್ತಿ ಮ್ಯಾಗ್ನಾಕಾರ್ಟಾಗೆ ಸಲ್ಲುತ್ತದೆ. ಜಗತ್ತಿನ ಪ್ರತಿಯೊಂದು ದೇಶದ ಸಂವಿಧಾನದ ಮೇಲೆ ಮ್ಯಾಗ್ನಾ ಕಾರ್ಟಾದ ಪ್ರಭಾವವಿದೆ. ಮ್ಯಾಗ್ನಾಕಾರ್ಟಾ ಒಪ್ಪಂದಕ್ಕಿಂತ ಅರ್ಧ ಶತಮಾನ ಹಿಂದೆಯೆ ಬಸವಣ್ಣನವರು ಅನುಭವ ಮಂಟಪ ಸ್ಥಾಪಿಸುವುದರ ಮೂಲಕ ಜನರಲ್ಲಿ ಪ್ರಜಾಪ್ರಭುತ್ವದ ಅರಿವು ಮೂಡಿಸಿದ್ದರು. ಅಸ್ಪೃಶ್ಯರು ಮೊದಲು ಮಾಡಿ ವಿವಿಧ ಜಾತಿಗಳ ಜನ ಅನುಭವ ಮಂಟಪದಲ್ಲಿದ್ದರು. ೭೭೦ ಅಮರಗಣಂಗಳಲ್ಲಿ ಬಹುಪಾಲು ಮಂದಿ ವಿವಿಧ ಕಾಯಕಜೀವಿಗಳೇ ಆಗಿದ್ದರು. ಲೋಕವೇ ತಾನಾದವನು ಅಂದರೆ ಸಕಲ ಜೀವಾತ್ಮರಿಗೆ ಲೇಸನೇ ಬಯಸುವವನು ಮಾತ್ರ ಗಣ ಎಂದು ಕರೆಯಿಸಿಕೊಳ್ಳುತ್ತಾನೆ. ಹೀಗೆ ಶರಣರು ಎಲ್ಲ ರೀತಿಯ ಅಸಮಾನತೆಗಳಿಗೆ ವಿರುದ್ಧವಾಗಿದ್ದರು.

ಪ್ರಜಾಪ್ರಭುತ್ವದ ಆಶಯಗಳಿಗೆ ಪೂರಕವಾದ ವಿಚಾರ ಗಳನ್ನು ವಚನಕಾರರೆಲ್ಲ ಹೊಂದಿದ್ದರೆ ಎಂಬುದಕ್ಕೆ ಅವರ ಚಳುವಳಿ ಮತ್ತು ವಚನಗಳು ಸಾಕ್ಷಿಯಾಗಿವೆ. ಬಸವಣ್ಣ ನವರು ಇಷ್ಟಲಿಂಗದ ಮೂಲಕ ದೇವರನ್ನು ಖಾಸಗೀಕರಣ ಗೊಳಿಸಿದರು. ಜಂಗಮಲಿಂಗದ ಮೂಲಕ ಮನುಷ್ಯನನ್ನು ಸಾಮಾಜೀಕರಣಗೊಳಿಸಿದರು. ಮನುಷ್ಯ ನಿಜವಾಗಿಯೂ ಸಾಮಾಜೀಕರಣಗೊಂಡಾಗ ಜೀವಕಾರುಣ್ಯದಿಂದ ತುಂಬಿದ ಸರ್ವಸಮಾನತೆಯ ಪ್ರಜ್ಞೆಯುಳ್ಳ ಶರಣನೆಂದೆನಿಸಿ ಕೊಳ್ಳುತ್ತಾನೆ. ಇಂಥ ವಿಶಾಲ ಮನೋಭಾವದವರು ಯಾವುದೇ ದೇಶದಲ್ಲಿದ್ದರೂ ಅವರು ಶರಣರೇ ಆಗಿರುತ್ತಾರೆ.

ಭಾರತದ ಸಂವಿಧಾನ ರಚನೆಗಾಗಿ ಬಾಬಾಸಾಹೇಬ ಅಂಬೇಡ್ಕರರು ವಿಶ್ವದ ಎಲ್ಲ ದೊಡ್ಡ ರಾಷ್ಟ್ರಗಳ ಸಂವಿಧಾನ ಗಳ ಅಧ್ಯಯನ ಮಾಡಿದರು ಮತ್ತು ವಿಶ್ವದಲ್ಲಿ ಮೊದಲ ಬಾರಿಗೆ ಪ್ರಜಾಪ್ರಭುತ್ವವನ್ನು ಉಸಿರಾಡಿದ ಬೌದ್ಧಧರ್ಮ ವನ್ನು ಸ್ವೀಕರಿಸಿ ತಮ್ಮ ಆಧ್ಯಾತ್ಮಿಕ ತೃಷೆಯನ್ನು ಇಂಗಿಸಿ ಕೊಂಡರು.

ಭಾರತದ ಸಂವಿಧಾನದ ಆಶಯಗಳು ಮತ್ತು ಬೌದ್ಧ ಧರ್ಮದ ಆಶಯಗಳು ಬಸವ ಪ್ರಜ್ಞೆಯಲ್ಲಿ ಇವೆ. ಬಸವಣ್ಣ ನವರ ಜೀವಿತ ಕಾಲದಲ್ಲಿ ಅವರ ಕ್ರಾಂತಿಕಾರಿ ವಿಚಾರಗಳಿಗೆ ರಾಜಾಶ್ರಯ ಸಿಗಲಿಲ್ಲ. ಸಮಗಾರ ಹರಳಯ್ಯನ ಮಗ ಮತ್ತು ಬ್ರಾಹ್ಮಣ ಮಧುವರಸನ ಮಗಳ ಮದುವೆಗೆ ವಿರೋಧ ವ್ಯಕ್ತವಾಗಿ ಕೊನೆಗೆ ಆ ಶರಣರ ಭೀಕರ ಹತ್ಯಾಕಾಂಡ ನಡೆಯಿತು. ರಾಜಾಶ್ರಯ ಹೊಂದಿದ್ದ ಮನು ಧರ್ಮದ ಪ್ರಕಾರ ಅವರು ಬೇರೆಯಾಗಿದ್ದರೂ ಬಸವ ಧರ್ಮದ ಪ್ರಕಾರ ಒಂದೇ ಆಗಿದ್ದರು. ಆದರೆ ಪಟ್ಟಭದ್ರ ಹಿತಾಸಕ್ತಿಗಳು ಬಸವಧರ್ಮವನ್ನು ಹಾಳುಮಾಡುವುದಕ್ಕಾಗಿ ಬಿಜ್ಜಳನ ಮನಸ್ಸು ಕೆಡಿಸಿ ಈ ಕೃತ್ಯ ಎಸಗಿದವು.

ಆದರೆ ಇಂದು ಬಸವಣ್ಣನವರ ವಿಚಾರಗಳಿಗೆ ಸಂವಿಧಾನದ ಮೂಲಕ ರಾಜಾಶ್ರಯ ಸಿಕ್ಕಿದೆ. ಅಂತರ್ಜಾತಿ ವಿವಾಹ, ವಿಧವಾ ವಿವಾಹ ಮತ್ತು ದೇವದಾಸಿಯರ ಮದುವೆಗಳಿಂದ ಕೂಡಿದ ಮಹಿಳಾ ವಿಮೋಚನಾ





ಚಳುವಳಿ, ಅಸ್ಪೃಶ್ಯತಾ ನಿವಾರಣಾ ಚಳುವಳಿ, ಜಾತೀಯತೆ ವಿರುದ್ಧ ಚಳುವಳಿ, ಲಿಂಗಭೇದದ ವಿರುದ್ಧ ಚಳುವಳಿ, ವಿವಿಧ ಕಾಯಕಜೀವಿಗಳ ಚಳುವಳಿ, ವಯಸ್ಕರ ಶಿಕ್ಷಣವೂ ಸೇರಿದಂತೆ ಶೈಕ್ಷಣಿಕ ಚಳವಳಿ ಹೀಗೆ ನವಸಮಾಜಕ್ಕಾಗಿ ತುಡಿಯುವ ಎಲ್ಲ ಚಳವಳಿಗಳನ್ನೂ ವಚನಕಾರರು ಮಾಡಿ ದ್ದರು. ಈಗ ಈ ಎಲ್ಲ ಚಳವಳಿಗಳು ಸಂವಿಧಾನಬದ್ಧ ವಾಗಿದ್ದು ಬಸವಣ್ಣನವರ ಮುಂದಾಲೋಚನೆಗೆ ಸಾಕ್ಷಿಯಾಗಿವೆ.

ಕಳೆದ ಶತಮಾನದಲ್ಲಿ ಕ್ಯೂಬಾದೇಶ ಅಮೆರಿಕಾದ ಅಧೀನದಲ್ಲಿದ್ದಾಗ ಅದರ ರಾಜಧಾನಿ ಹವಾನಾ ವೇಶ್ಯಾ ವಾಟಿಕೆಗಳಿಂದ ತುಂಬಿ ಹೋಗಿತ್ತು. ಸ್ವಾತಂತ್ರ್ಯ ನಂತರ ಕಮ್ಯುನಿಸ್ಟ್ ಯುವಕರನೇಕರು ವೇಶ್ಯೆಯರನ್ನು ಮದುವೆ ಯಾಗುವ ಮೂಲಕ ಆದರ್ಶ ಮೆರೆದರು. ಕಲ್ಯಾಣದಲ್ಲಿ ಶರಣರು ಪಣ್ಯಾಂಗನೆಯನ್ನು ಮದುವೆ ಆಗಿ ಪುಣ್ಯಾಂಗನೆ ಯರನ್ನಾಗಿ ಮಾಡಿ ವೇಶ್ಯಾ ಸಮಸ್ಯೆಯನ್ನು ಬಗೆಹರಿಸುವತ್ತ ಮುನ್ನಡೆದರು.

೧೮೫೭ರಲ್ಲಿ ದೇಶದಲ್ಲಿ ಮೊದಲ ಬಾರಿಗೆ ಮುಂಬೈ ವಿಶ್ವವಿದ್ಯಾಲಯದ ಸ್ಥಾಪನೆಯಾಯಿತು. ೧೮೭೫ರಲ್ಲಿ ಬೆಳಗಾವಿಯ ಪೋಸ್ಟ್ ಮಾಸ್ತರರೊಬ್ಬರು ವಿಶ್ವವಿದ್ಯಾಲಯದ ಆಡಳಿತ ಮಂಡಳಿಗೆ ಪತ್ರ ಬರೆದು ತಮ್ಮ ಮಗಳು ಮ್ಯಾಟ್ರಿಕ್ ಪರೀಕ್ಷೆ ಬರೆಯಲು ಅವಕಾಶವಿದೆಯೆ? ಎಂದು ಕೇಳಿದರು. ವಿಶ್ವವಿದ್ಯಾಲಯದ ಕಾನೂನಿನಲ್ಲಿ ಮಹಿಳಾ ಶಿಕ್ಷಣಕ್ಕೆ ಅವಕಾಶ ಇದ್ದಿದ್ದಿಲ್ಲ. ಹೀಗಾಗಿ ಆ ಪೋಸ್ಟ್ ಮಾಸ್ತರ್ ಮಗಳಿಗೆ ಅವಕಾಶ ಸಿಗಲಿಲ್ಲ. ಆಗ ಮುಂಬೈ ವಿಶ್ವವಿದ್ಯಾಲಯ ಲಂಡನ್ ವಿಶ್ವವಿದ್ಯಾಲಯದ ಅಧೀನದಲ್ಲಿತ್ತು. ಆಡಳಿತ ಮಂಡಳಿ ಮಹಿಳಾ ಶಿಕ್ಷಣದ ಈ ಹೊಸ ಸಮಸ್ಯೆ ಕುರಿತು ಲಂಡನ್ ವಿಶ್ವವಿದ್ಯಾಲಯಕ್ಕೆ ತಿಳಿಸಿತು. ಆ ಕಾಲಕ್ಕೆ ಲಂಡನ್ ವಿಶ್ವ ವಿದ್ಯಾಲಯದಲ್ಲಿ ಕೂಡ ಮಹಿಳೆಯರಿಗೆ ಪ್ರವೇಶ ಇದ್ದಿದ್ದಿಲ್ಲ. ಈ ಕುರಿತು ಚಿಂತನೆ ನಡೆಸಿದ ಲಂಡನ್ ವಿಶ್ವವಿದ್ಯಾಲಯ ಎಂಟು ವರ್ಷಗಳ ತರುವಾಯ, ಮಹಿಳೆಯರು ಪರೀಕ್ಷೆ ಬರೆಯಬಹುದೆಂದು ನಿರ್ಧರಿಸಿ ಮುಂಬೈ ವಿಶ್ವವಿದ್ಯಾಲಯಕ್ಕೆ ತಿಳಿಸಿತು. ಮುಂದೆ 1885ರಲ್ಲಿ ಕೊರ್ನಿಲಿಯಾ ಸೊರಾಬ್ಜಿ ಎಂಬ ಮಹಿಳೆ ಪುಣೆಯ ಡೆಕ್ಕನ್ ಕಾಲೇಜಿನಿಂದ ಮೊದಲ ಪದವೀಧರೆಯಾದಳು ಎಂದು ಪ್ರೊ. ಡೋಂಗರಕರ್ ಸಂಶೋಧನೆ ಮಾಡಿರುವುದಾಗಿ ಮುಂಬೈ ಮಹಾನಗರ ಪಾಲಿಕೆಯ ನಿವೃತ್ತ ಅಸಿಸ್ಟೆಂಟ್ ಕಮೀಷನರ್ ಎಸ್.ಜಿ. ಮಸಳಿ ಅವರು ನನಗೆ ತಿಳಿಸಿದ್ದಾರೆ. ಆದರೆ ೧೨ನೇ ಶತಮಾನದಲ್ಲೇ ಶರಣ ಸಂಕುಲದಲ್ಲಿ ಅನೇಕ ವಚನಕಾರ್ತಿ ಯರಿದ್ದರು. ಇಲ್ಲಿಯವರೆಗೆ ೩೩ ವಚನಕಾರ್ತಿಯರ ವಚನಗಳು ಸಿಕ್ಕಿವೆ. ಇವರ ಭಾಷಾ ಪ್ರೌಢಿಮೆ, ಸಾಹಿತ್ಯ ಶಕ್ತಿ ಮತ್ತು ತತ್ತ್ವಜ್ಞಾನ ಅಚ್ಚರಿ ಮೂಡಿಸುತ್ತವೆ. ಒಂದೇ ಪ್ರದೇಶದಲ್ಲಿ, ಒಂದೇ ಕಾಲಘಟ್ಟದಲ್ಲಿ ಇಷ್ಟೊಂದು ಮಂದಿ ಉನ್ನತ ಸಾಧನೆಯ ಮಹಿಳಾ ಸಾಹಿತಿಗಳು ಕಾಣಿಸಿಕೊಂಡ ಉದಾಹರಣೆ ವಿಶ್ವದ ಇತಿಹಾಸಲ್ಲಿ ಇನ್ನೊಂದು ಇಲ್ಲ.

ಪ್ರಜಾಪ್ರಭುತ್ವದ ತಾಯಿ ಎನಿಸಿಕೊಂಡ ಇಂಗ್ಲೆಂಡ್‌ನಲ್ಲಿ ೨೦ನೇ ಶತಮಾನದವರೆಗೂ ಮಹಿಳೆಯರಿಗೆ ಮತದಾನದ ಹಕ್ಕು ಇರಲಿಲ್ಲ. ಆದರೆ ಅನುಭವ ಮಂಟಪದಲ್ಲಿ ಮಹಿಳೆ ಯರಿಗೆ ಅಭಿಪ್ರಾಯ ಸ್ವಾತಂತ್ರ್ಯವಿತ್ತು. ಭಾರತದಲ್ಲಿ ಜಾತಿಬೇಧ ನೀತಿ ಇರುವ ಹಾಗೆ ಅಮೇರಿಕಾದಲ್ಲಿ ಮೊನ್ನೆ ಮೊನ್ನೆಯವರಿಗೂ ವರ್ಣಬೇಧ ನೀತಿ ಇತ್ತು ಇಂದಿಗೂ ಅಲ್ಲಿ ಕರಿಯರನ್ನು ಎರಡನೆಯ ದರ್ಜೆಯ ಪ್ರಜೆಗಳ ಹಾಗೆ ಕಾಣುವ ಪರಿಸ್ಥಿತಿ ಇದೆ. ೧೯೬೮ರಲ್ಲಿ ಕೊಲೆ ಗೀಡಾದ ಅಮೆರಿಕಾದ ಕರಿಯರ ಗಾಂಧಿ ಮಾರ್ಟಿನ್ ಲೂಥರ್ ಕಿಂಗ್ ಅವರ 'ಐ ಹ್ಯಾವ್ ಎ ಡ್ರೀಮ್' ಎಂಬ ಭಾಷಣ ಜಗತ್ ಪ್ರಸಿದ್ಧವಾಗಿದೆ. ಕಪ್ಪು ಮತ್ತು ಬಿಳಿ ಹುಡುಗ ಹುಡುಗಿಯರು ಜನಾಂಗ ದ್ವೇಷ ಮರೆತು ಒಂದಾಗಿ ಮುನ್ನಡೆಯಬೇಕೆನ್ನುವುದು ಆ ಭಾಷಣದ ತಿರುಳಾಗಿದೆ. ಶರಣರು ೧೨ನೇ ಶತಮಾನದಲ್ಲೇ ಹರಳಯ್ಯ ಮಧುವರಸರ ಮಕ್ಕಳ ಮದುವೆ ಮಾಡಿಸಿದರು. ಅದಕ್ಕಾಗಿ ಎಲ್ಲ ಕಷ್ಟನಷ್ಟಗಳನ್ನು ಎದುರಿಸಿದರು.

19ನೇ ಶತಮಾನದಲ್ಲಿ ಕಮ್ಯುನಿಷ್ಟ್ ತತ್ತ್ವಜ್ಞಾನಿ ಕಾರ್ಲ್ ಮಾರ್ಕ್ಸ್ 'ಜಗತ್ತಿನ ಕಾರ್ಮಿಕರೇ ಒಂದಾಗಿರಿ, ನೀವು ಒಂದಾದರೆ ನಿಮ್ಮ ಸಂಕೋಲೆಗಳನ್ನು ಹೊರತುಪಡಿಸಿ ನೀವು ಏನನ್ನೂ ಕಳೆದು ಕೊಳ್ಳುವುದಿಲ್ಲ' ಎಂದು ಸಾರಿದರು. ಬಸವಣ್ಣನವರು 12ನೇ ಶತಮಾನದಲ್ಲಿ ಭಾರಿ ತೆರಿಗೆ ಮತ್ತು ಸುಲಿಗೆಯಿಂದ ನರಳುತ್ತಿದ್ದ ಕಾಯಕ ಜೀವಿಗಳನ್ನು ಅಸ್ಪೃಶ್ಯತೆಯಿಂದ ಬಳಲುತ್ತಿದ್ದ ದಲಿತರನ್ನು, ಎಲ್ಲ ಹಕ್ಕು ಗಳಿಂದ ವಂಚಿತರಾಗಿದ್ದ ಮಹಿಳೆಯರನ್ನು ವಿಮೋಚನೆಯ ದಾರಿಯೆಡೆಗೆ ತಂದರು.

ವಿಶ್ವಸಂಸ್ಥೆಯ ಮಾನವಹಕ್ಕುಗಳು ಕೂಡ ಬಸವಪ್ರಜ್ಞೆ ಯಿಂದ ಹೊರತಾಗಿಲ್ಲ. ಜೀವಿಸುವ ಹಕ್ಕು, ಮಾತನಾಡುವ ಹಕ್ಕು, ವರ್ಗ, ವರ್ಣ ಮತ್ತು ಲಿಂಗಭೇದನೀತಿಯ ವಿರುದ್ಧ ಹೋರಾಡುವ ಹಕ್ಕುಗಳು ಮಾನವಹಕ್ಕು ಗಳಾಗುತ್ತವೆ. ವಿಶ್ವಸಂಸ್ಥೆಯ ಮಾನಹಕ್ಕುಗಳ ವಿಭಾಗ ತನ್ನ ೩೦ ಅಂಶಗಳ

ಕಾರ್ಯಕ್ರಮದಲ್ಲಿ ಈ ಮಾನವ ಹಕ್ಕುಗಳನ್ನು ಕುರಿತು ವಿವರಿಸಿದೆ. ಈ ಎಲ್ಲ ಮಾನವ ಹಕ್ಕುಗಳನ್ನು ಸಾಧಿಸುವುದೇ ವಚನ ಚಳವಳಿಯ ಗುರಿಯಾಗಿತ್ತು.

ಬಸವಪ್ರಜ್ಞೆಯು ಮಾನವ ಹಕ್ಕುಗಳ ಪ್ರಜ್ಞೆಯಾಗಿದೆ; ಪ್ರಜಾಪ್ರಭುತ್ವವಾದಿ ಪ್ರಜ್ಞೆಯಾಗಿದೆ; ಮುಂದುವರಿದ ಸಮಾಜವಾದಿ ಪ್ರಜ್ಞೆಯಾಗಿದೆ, ಅದಕ್ಕೂ ಮುಂದುವರಿದ ಸಮಾತಾವಾದಿ ಪ್ರಜ್ಞೆಯಾಗಿದೆ. ಒಟ್ಟಾರೆ ಪ್ರಜಾಪ್ರಭುತ್ವದ ತಾಯಿಯಾಗಿದ್ದಾರೆ ಬಸವಣ್ಣನವರು. ಅಂತೆಯೆ ಬಸವಣ್ಣನವರು ಹಳೆಯ 33 ಕೋಟಿ ದೇವತೆಗಳನ್ನು ಆಚೆ ತಳ್ಳಿದ ನಂತರ ನಮಗೆ ಹೊಸ ಸರ್ವ ಸಮತಾವಾದಿ ದೇವರನ್ನು ಕೊಟ್ಟರು. ಬಸವಣ್ಣನವರ ಕೂಡಲಸಂಗಮದೇವ ಮಾದಾರ ಚನ್ನಯ್ಯನ ಮನೆಯಲ್ಲಿ ಅಂಬಲಿಯನ್ನು ಕುಡಿಯುವ ದೇವರಾಗಿದ್ದಾನೆ. ಬಡವರ, ದಲಿತರ, ಕಾಯಕಜೀವಿಗಳ ಒಟ್ಟಾರೆ ಇಡೀ ಮಾನವ ಕುಲದ ದೇವರಾಗಿದ್ದಾನೆ.

ಕುಟುಂಬ ಪ್ರೇಮ, ಸಮಾಜ ಪ್ರೇಮ, ದೇಶದ ಪ್ರೇಮ ಮತ್ತು ವಿಶ್ವಪ್ರೇಮ ಬಸವಧರ್ಮದ ಪ್ರೇಮತತ್ವವಾಗಿದೆ. ಇವೆಲ್ಲ ಕೂಡಿದಾಗಲೆ ಲಿಂಗಪ್ರೇಮವಾಗುತ್ತದೆ. 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂದು ಜೇಡರ ದಾಸಿಮಯ್ಯನವರು ಕುಟುಂಬ ಪ್ರೇಮದ ಮಹತ್ವವನ್ನು ತಿಳಿಸಿದ್ದಾರೆ. 'ಜೀವಿಸುವ ಜೀವಕ್ಕೆ ಶೃಂಗಾರ ಗಣಮೇಳಾಪ' ಎಂದು ಅಕ್ಕ ಮಹಾದೇವಿ ಸಮಾಜ ಪ್ರೇಮ ಸಾರಿದ್ದಾರೆ. 'ಕಳ್ಳ ನಾಣ್ಯ ಸಲುಗೆಗೆ ಸಲ್ಲದು' ಎಂದು ಬಸವಣ್ಣ ದೇಶ ಪ್ರೇಮ ಸೂಚಿಸಿದ್ದಾರೆ. 'ಆರಂಭವ ಮಾಡಿ ಸಂಸಾರ ಸ್ಥಿತಿ ಕಳೆಯದಿದ್ದರೆ ಆ ಆರಂಭವೆ ಕೇಡು' ಎಂದು ಚನ್ನಬಸವಣ್ಣನವರು ವಿಶ್ವಪ್ರೇಮ ಮೆರೆದಿದ್ದಾರೆ.

ಬಸವಪ್ರಜ್ಞೆಯ ಮಾನವ ಹಕ್ಕುಗಳ ಪ್ರಜ್ಞೆಯಾಗಿದೆ; ಪ್ರಜಾಪ್ರಭುತ್ವವಾದಿ ಪ್ರಜ್ಞೆಯಾಗಿದೆ; ಮುಂದುವರಿದ ಸಮಾಜವಾದಿ ಪ್ರಜ್ಞೆಯಾಗಿದೆ, ಅದಕ್ಕೂ ಮುಂದುವರಿದ ಸಮತಾವಾದಿ ಪ್ರಜ್ಞೆಯಾಗಿದೆ. ಒಟ್ಟಾರೆ ಪ್ರಜಾಪ್ರಭುತ್ವದ ತಾಯಿಯಾಗಿದ್ದಾರೆ ಬಸವಣ್ಣನವರು. ಅಂತೆಯೇ ಬಸವಣ್ಣನವರು ಹಳೆಯ 33 ಕೋಟಿ ದೇವತೆಗಳನ್ನು ಆಚೆ ತಳ್ಳಿದ ನಂತರ ನಮಗೆ ಹೊಸ ಸರ್ವ ಸಮತಾವಾದಿ ದೇವರನ್ನು ಕೊಟ್ಟರು. ಬಸವಣ್ಣನವರ ಕೂಡಲ ಸಂಗಮದೇವ ಮಾದಾರ ಚನ್ನಯ್ಯನ ಮನೆಯಲ್ಲಿ ಅಂಬಲಿಯನ್ನು ಕುಡಿಯುವ ದೇವರಾಗಿದ್ದಾನೆ. ಬಡವರ, ಹಿಂದುಳಿದವರ, ದಲಿತರ, ಕಾಯಕಜೀವಿಗಳ ಒಟ್ಟಾರೆ ಇಡೀ ಮಾನವಕುಲದ ದೇವರಾಗಿದ್ದಾನೆ.

☆

## ಸಾಹಿತ್ಯರತ್ನ ಅನ್ನದಾನಯ್ಯ ಪುರಾಣಿಕರ ವಚನಗಳು

೧. ತನುವಿನ ಕೊಳೆಯನು ನಿತ್ಯತೊಳೆದು ಶೃಂಗರಿಸುವವರೇ
ಮನದ ಕೊಳೆಯನು ನಿತ್ಯ ತೊಳೆದು ಶುಭ್ರಗೊಳಿಸಿರೋ!
ಹೆಂಡತಿಮಕ್ಕಳ ವ್ಯಾಮೋಹದಲಿ ಮುಳುಗಿರುವವರೇ
ಮಹಾದೇವನ ಧ್ಯಾನದಲಿ ಮನವತೊಡಗಿಸಿರೋ !
ಧನವನು ಬೇಡೆನು, ವಸ್ತು ವಾಹನ ಸಿರಿ ವೈಭವ ಬೇಡೆನು
ಓದಿನಿತು ಭಕ್ತಿಯನಿತ್ತರೆ, ತನ್ನನೇ ನೀಡುವನು
ಶ್ರೀ ಗುರು ಸಿದ್ಧಲಿಂಗೇಶ್ವರನು ।

೨. ಮಂತ್ರಿಯ ಮನೆಯ ನಾಯಿ ಸತ್ತರೆ
ಸಾಂತ್ವನ ಹೇಳಲು ಸಾಲುಸಾಲಾಗಿ ನಿಲ್ಲುವರಯ್ಯ !
ಸತ್ಪುರುಷನೊಬ್ಬನು ಸತ್ತರೆ
ಅವನ ಆಣೆಯಲಿ ಯಾರೂ ಸುಳಿಯರಯ್ಯ !
ಅಧಿಕಾರ, ಐಶ್ವರ್ಯದ ಆರಾಧಕರು
ಮಾನವತೆಯ ಪರಮಶತ್ರುಗಳಯ್ಯ
ಶ್ರೀ ಗುರು ಸಿದ್ಧಲಿಂಗೇಶ್ವರಾ ।

೩. ಎಲ್ಲಿ ನೋಡಿದಡಲ್ಲಿಂದು ಮಾಲ್‌ಗಳು, ಬಾರುಗಳು !
ಎಲ್ಲಿ ನೋಡಿದಡಲ್ಲಿಂದು ಕುಡಿತಗಳು ಕುಣಿತಗಳು !
ಗಂಡು ಹೆಣ್ಣುಗಳ ಮಿಲನಗಳು, ನಗ್ನ ನಾಟಕಗಳು !
ನೀತಿ, ಧರ್ಮ, ಸಭ್ಯತೆಯ ಉಲ್ಲಂಘನೆಗಳು !
ಮಾನವತೆಯ ಅಧಃಪತನದ ಪುರಾವೆಗಳು
ಶ್ರೀ ಗುರು ಸಿದ್ಧಲಿಂಗೇಶ್ವರಾ ಲೋಕವನು ರಕ್ಷಿಸಯ್ಯ ।

೪. ನೂರು ಮಂತ್ರಗಳನು ಪಠಿಸುವುದಕ್ಕಿಂತ
ನಿರಕ್ಷರಿಗೆ ನಾಲ್ಕು ಅಕ್ಷರ ಕಲಿಸುವುದು ಮೇಲದು
ನೂರು ಅನ್ನಸಂತರ್ಪಣೆ ಏರ್ಪಡಿಸುವುದಕ್ಕಿಂತ
ಹಸಿದವಗೆ ತುತ್ತು ಅನ್ನ ನೀಡುವುದು ಮೇಲಯ್ಯ
ಹತ್ತಾರು ಮಠ ಮಂದಿರ, ಮಸೀದಿ, ಚರ್ಚು ಕಟ್ಟಿಸುವುದಕ್ಕಿಂತ
ನಿರಾಶ್ರಿತರಿಗೆ ವಸತಿಗಳನು ನಿರ್ಮಿಸುವುದು ಮೇಲಯ್ಯ !
ನೂರಾರು ಧರ್ಮೋಪದೇಶಗಳ ಮಾಡುವುದಕ್ಕಿಂತ
ಧರ್ಮಿಷ್ಠನಾಗಿ ಬಾಳುವುದು ಮೇಲಯ್ಯ !
ಶ್ರೀ ಗುರು ಸಿದ್ಧಲಿಂಗೇಶ್ವರಾ ।
ಕೋಟ್ಯಾಧೀಶನಾಗಿ ಮೆರೆಯುವುದಕ್ಕಿಂತ
ಘನಮನ ಸಂಪನ್ನನಾಗಿ ಬಾಳುವುದು ಮೇಲಯ್ಯ !

೫. ವಿಜ್ಞಾನವಿಲ್ಲದ ಜ್ಞಾನಿ ಹೆಳವನಯ್ಯ
ಜ್ಞಾನವಿಲ್ಲದ ವಿಜ್ಞಾನಿ ಕುರುಡನಯ್ಯಾ
ಆಚಾರವಿಲ್ಲದ ಆಚಾರ್ಯ ಅಜ್ಞಾನಿ ಅಯ್ಯಾ
ಶ್ರೀ ಗುರು ಸಿದ್ಧಲಿಂಗೇಶ್ವರಾ ! ನಡೆಯಿಲ್ಲದ ನುಡಿ ಅರಿವಿಂಗೆ ಹಾನಿ ಅಯ್ಯಾ.

–ಸಾಹಿತ್ಯರತ್ನ ಅನ್ನದಾನಯ್ಯ ಪುರಾಣಿಕ
ಜಯನಗರ, ಬೆಂಗಳೂರು.





# ರಂಗುರಂಗಿನ ಹೋಳಿ ಹಬ್ಬ

–ಯು.ಎನ್. ಸಂಗನಾಳಮಠ, ಹೊನ್ನಾಳಿ.

ಅಬಾಲವೃದ್ಧರಾದಿಯಾಗಿ, ಪರಸ್ಪರ ಸಾಮರಸ್ಯವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆಚರಿಸುವ ಹಬ್ಬ ಹೋಳಿ ಹಬ್ಬ. ವಿವಿಧ ಜನಾಂಗಗಳಲ್ಲಿ ವಿಥ ವಿಧ ರೀತಿಯಲ್ಲಿ ಭಾರತಾದ್ಯಾಂತ ಆಚರಿಸುತ್ತಾರೆ. ಇದು ರಂಗಿನ ಹಬ್ಬ. ಸೃಷ್ಟಿಯ ವಸಂತಾಗಮನವನ್ನು ಸ್ವಾಗತಿಸುವ ಹಬ್ಬ. ಆದ್ದರಿಂದ ವಸಂತೋತ್ಸವ. ಇದಕ್ಕೆ ಕಾಮನ ಹಬ್ಬ, ವಸಂತ ಪೂರ್ಣಿಮ ಎಂದೂ ಕರೆಯುತ್ತಾರೆ. ಯಾವುದೇ ಧಾರ್ಮಿಕ ಕಟ್ಟುಪಾಡಿಲ್ಲದ ಎಲ್ಲ ಹಿಂದೂಗಳು ಆಚರಿಸುವ ಹಬ್ಬ. ಮನೋರಂಜನೆ ಪ್ರಾಧಾನ್ಯವಾದ ಈ ಹಬ್ಬ ಎಲ್ಲರೊಡನೆ ಬೆರೆತು ಬಾಂಧವ್ಯದ ಹೆಚ್ಚಳಕ್ಕೆ ಕಾರಣವಾಗುತ್ತದೆ.

ಹುಣ್ಣಿಮೆ ಬರುವ ಮುನ್ನ ಪ್ರಕೃತಿ ಹೊಸ ಚಿಗುರಿನಿಂದ ಹಸಿರು ಹಸಿರಾಗಿ ಕಾಣುತ್ತದೆ. ಮಾವು, ಮಲ್ಲಿಗೆ, ಸಂಪಿಗೆ ಈ ಮರ-ಗಿಡಗಳಲ್ಲಿ ಚಿಗುರು ಕಾಣಿಸುತ್ತದೆ. ಈ ಸಂದರ್ಭದಲ್ಲಿ ಮಾನವರಲ್ಲಿಯೂ ಶೃಂಗಾರದ ಪ್ರೇಮ ಭಾವನೆ ಚಿಗುರುತ್ತವೆ. ಕಾಮನ ಹಬ್ಬದ ಪ್ರಮುಖ ಹಿನ್ನಲೆ ಎಂದರೆ ಶಿವನು ತನ್ನ ಹಣೆಗಣ್ಣಿನಿಂದ ಕಾಮನನ್ನು ದಹಿಸಿ ಲೋಕಹಿತಕ್ಕಾಗಿ ಕಾಮನನ್ನು ಈ ಲೋಕ ಸ್ತ್ರೀ-ಪುರುಷರೆಲ್ಲರ ಹೃದಯದಲ್ಲಿರಿಸಿದ. ಶಿವನು ಕಾಮನನ್ನು ದಹಿಸಿದರೂ, ನಂತರ ಪಾರ್ವತಿಗೆ ಒಲಿದು ಅರ್ಧ ಶರೀರವನ್ನು ನೀಡಿದ್ದರಿಂದ ಕಾಮನಿಗೆ ಒಲಿದಂತೆ ಕಾಮ ಸೋತು ಗೆದ್ದರೆ, ಶಿವ ಗೆದ್ದು ಸೋತನು.

ಇನ್ನೊಂದು ಪೌರಾಣಿಕ ಹಿನ್ನಲೆ ನೋಡಿದರೆ-ಹಿರಣ್ಯ ಕಶ್ಯಪುವಿನ ತಂಗಿ ಹೋಲಿಕಾಳ ದಹನದ ದಿನ. ಬಾಲಕರೆಲ್ಲ ಸೇರಿ ಢುಂಢಾ ಎಂಬ ರಾಕ್ಷಸಿಯನ್ನು ಓಡಿಸಿದ ದಿನ. "ಯಮ ಸಕುಟುಂಬಸ್ಯ ಢುಂಢಾ ರಾಕ್ಷಸೀ ಪ್ರೇತ್ಯರ್ಥಂ ತತ್ಪೀಡಾ ಪರಿಹಾರಾರ್ಥಂ ಹೋಲಿಕಾ ಪೂಜನಂ ಕರಿಷ್ಯೆ" ಅಂದರೆ ನನ್ನ ಕುಟುಂಬಕ್ಕೆ ಢುಂಢಾ ರಾಕ್ಷಸಿಯ ಪೀಡೆ ಆಗದಿರಲು ಹೋಳಿಕಾ ಪೂಜೆ ಮಾಡುತ್ತೇನೆ. ಕಟ್ಟಿಗೆ, ಕುರುಳು ಹುಲ್ಲು, ಇತ್ಯಾದಿ ಹಾಕಿ ಬೆಂಕಿ ಹಚ್ಚುತ್ತಾರೆ. ಈ ಜ್ವಾಲೆಯನ್ನು ಪೂಜಿಸುತ್ತಾ. ಬೆಂಕಿ ಹಚ್ಚುವ ಸಾಧನಗಳನ್ನು ಕದ್ದು ತರಬೇಕು. ಇವನ್ನು ಮಕ್ಕಳೇ ತರಬೇಕು. ಬೆಂಕಿ ಹಚ್ಚಿದ ನಂತರ ಅಸಭ್ಯ ಅಶ್ಲೀಲ ಹಾಡೂ-ಪದಗಳಿಂದ ಅದರ ಸುತ್ತಲೂ ಕುಣಿದಾಗ ಆ ರಾಕ್ಷಸಿಗೆ ಆನಂದ. ಬೆಂಕಿ ಉರಿದ ಬೂದಿಗೆ ವಂದಿಸಿದಾಗ ಎಲ್ಲ ಪಾಪ ಪರಿಹಾರವಾಗುತ್ತದೆ. ಈ ರೀತಿಯ ಪ್ರತೀತಿ ಬೆಳೆದು ಬಂದಿದೆ.

ಹಲವಾರು ದಂತಕಥೆಗಳು ಈ ಹಬ್ಬದ ಹಿರಿಮೆಯನ್ನು ಹೇಳುತ್ತವೆ. ಬ್ರಹ್ಮದೇವನಿಂದ ಹಿರಣ್ಯಕಶ್ಯಪು ತನಗೆ ಯಾರಿಂದ, ಯಾವಾಗಲಾದರೂ, ರಾತ್ರಿ ಅಥವಾ ಹಗಲು, ಒಳಗೆ, ಹೊರಗೆ ಸಾವು ಬರಬಾರದೆಂದು ವರವನ್ನು ಹೊಂದಿದನು. ಮಗನಾದ ಪ್ರಹ್ಲಾದ ವಿಷ್ಣುಭಕ್ತನಾಗಿ ತಂದೆಯ ಅಹಂಕಾರವನ್ನು ನಿರಾಕರಿಸಿದ. ಬೆಂಕಿಯ ಪ್ರಸಾದದಿಂದ ಹುಟ್ಟಿದ. ತನ್ನ ತಂಗಿ ಹೋಳಿಕಾಗೆ ಪ್ರಹ್ಲಾದನನ್ನು ತನ್ನ ತೊಡೆಯ ಮೇಲೆ ಹಾಕಿಕೊಂಡು ಅಗ್ನಿಕುಂಡದ ಮೇಲೆ ಕುಳಿತುಕೊಳ್ಳಲು ಹಿರಣ್ಯಕಶ್ಯಪು ಹೇಳಿದನು. ಆದರೆ ಪ್ರಹ್ಲಾದ ಅಗ್ನಿಯಲ್ಲಿ ಬೇಯದೇ ಹೋಳಿಕಾ ಬೂದಿಯಾದಳು. ಅದಕ್ಕಾಗಿ ಹೋಳಿಕಾನ ಪ್ರತಿಕೃತಿಯನ್ನು ಹೋಳಿಹುಣ್ಣಿಮೆಯೆಂದು ಸುಡುತ್ತಾರೆ. ದುಷ್ಟಸಂಹಾರದ ಸಂಕೇತ.

ತಾರಕಾಸುರನ ಉಪದ್ರವ ಹೆಚ್ಚಾದಾಗ, ದೇವಾನು ದೇವತೆಗಳು ಶಿವ-ಪಾರ್ವತಿ ಸುತನಾದ ಕಾರ್ತಿಕೇಯನಿಂದ ಮಾತ್ರ ತಾರಕಾಸುರನ ಸಂಹಾರ ಸಾಧ್ಯ ಎಂದು ನಿರ್ಧರಿಸಿ ಶಿವನನ್ನು ವಿನಂತಿಸಲು ಹೋದರು. ಆದರೆ ಶಿವ ತೀವ್ರ ತಪಸ್ಸಿನಲ್ಲಿದ್ದನು. ಅದಕ್ಕಾಗಿ ಕಾಮದೇವನನ್ನು ಶಿವನ ತಪಸ್ಸು ಕೆಡಿಸಲು ಕಳಿಸುವರು. ಕಾಮದೇವನು ತನ್ನ ಮದನ-ಶರವನ್ನು ಬಿಟ್ಟಾಗ ಶಿವನ ತಪಸ್ಸು ಭಂಗವಾಗಿ, ಕೋಪದಿಂದ ಕಾಮದೇವನನ್ನು ತನ್ನ ಭಾಳನೇತ್ರದಿಂದ ಸುಟ್ಟನು. ರತಿಯ ವಿಲಾಪವನ್ನು ಕೇಳಿ ಕಾಮದೇವನಿಗೆ ಅನಂಗ ನಾಗಲು ಶಿವನು ವರವಿತ್ತನು. ಇದು ಹೋಳಿ ಹುಣ್ಣಿಮೆಯ ಪ್ರಬಲವಾದ ವಿಶಿಷ್ಟ ಸಂಕೇತ.

ಕೃಷ್ಣ ತಾನು ರಾಧೆ ಮತ್ತು ಗೋಪಿಕಾ ಸ್ತ್ರೀಯರೊಂದಿಗೆ ರಾಸಲೀಲೆಯಾಡುವಾಗ ಹೂಗಳನ್ನು ಸುರಿಸುತ್ತಿದ್ದನು ಮತ್ತು ಗುಲಾಲನ್ನು ಸಿಂಪಡಿಸುತ್ತಿದ್ದನು. ಗುಲಾಲನ್ನು ಎರಚುವ ಬಣ್ಣದ ನೀರನ್ನು (ಓಕುಳಿ) ಸಿಂಪಡಿಸುವ ಪದ್ಧತಿ ಇಂದಿನವರೆಗೂ ಇದೆ.

ಫಾಲ್ಗುಣ ಮಾಸದ ಹುಣ್ಣಿಮೆ ಹೋಳಿಹುಣ್ಣಿಮೆ. ಇದನ್ನು ಈ ದೇಶದ ವಿವಿಧೆಡೆಗಳಲ್ಲಿ ವಿಶಿಷ್ಟವಾಗಿ

ಆಚರಿಸುತ್ತಾರೆ. ಶ್ರೀಕೃಷ್ಣನ ಮಧುರೆ ಮತ್ತು ಉತ್ತರಪ್ರದೇಶ ಬಹಳ ಪ್ರಸಿದ್ಧ ವಾದದ್ದು. ಹುಣ್ಣಿಮೆ ಪ್ರಾರಂಭದ ಮೊದಲ ದಿನಗಳಿಂದ ಆಚರಣೆ ಪ್ರಾರಂಭ ಕೋಲಾಟ ಪ್ರಮುಖ ಆಕರ್ಷಣೆ. ಗಂಡು-ಹೆಣ್ಣು ಭೇದ-ಭಾವವಿಲ್ಲದೆ ಸ್ಪರ್ಧೆಗಳಾಗಿ ಆಡುತ್ತಾರೆ. ಕೃಷ್ಣ ಮತ್ತು ರಾಧೆಯರ ಪ್ರತಿಮೆಗಳನ್ನು ಜೋಕಾಲಿಯಲ್ಲಿರಿಸಿ ತೂಗುತ್ತಾರೆ. 'ಡೋಲಾ-ಯಾತ್ರಾ ಎನ್ನುತ್ತಾರೆ. ರಾಜಸ್ಥಾನದ ಅಜಮೀರ ಜಿಲ್ಲೆಯ ಬೇವಾರ್ ಪಟ್ಟಣದ ಆಚರಣೆ ವಿಶಿಷ್ಟವಾದದ್ದು. ಒಬ್ಬ ವ್ಯಕ್ತಿ ಅಂದಿನ ದಿನ ಮಾತ್ರ ರಾಜನಾಗಿ ರಾಜಪೋಷಾಕು ಧರಿಸಿ ಊರಲ್ಲಿ ಮೆರೆವಣಿಗೆ ಹೊಂದು ವನು. ಅಂದಿನ ವಿಶೇಷ ಎಂದರೆ ಬಟ್ಟೆಯ ಗಂಟು ಕಟ್ಟಿ ಅದನ್ನು ಬಣ್ಣ ತುಂಬಿದ ಕೊಡದಲ್ಲಿ ಅದ್ದಿ ಯಾರು ಬೇಕಾದರೂ ಯಾರಿಗಾದರೂ ಅದರಿಂದ ಹೊಡೆಯ ಬಹುದು. ಬಣ್ಣದ ಗುಲಾಲಿನ ಪಟಾಕಿಗಳ ಖರ್ಚನ್ನು ಅಂದಿನ ವೇಷಧಾರಿ ರಾಜನು ಭರಿಸಬೇಕು.

ಮಥುರಾದಿಂದ 53 ಕಿ.ಮೀ. ದೂರದ ಫಲಾತೇದ್ ಎಂಬಲ್ಲಿ ಹಬ್ಬದ ರಾತ್ರಿ ಪೂಜಾರಿಗಳು ಕೆಂಡ ಹಾಯುತ್ತಾರೆ. ಬಿಕಾನೇರದ ಸಿದ್ಧಿ-ಸಂತರು ಕೆಂಡ ಹಾಯುತ್ತ ಕೆಂಡದ ಉಂಡೆಗಳನ್ನು ಕೈಯಲ್ಲಿ ಹಿಡಿದುಕೊಂಡು ಚೆಂಡಿನಂತೆ ಆಡುತ್ತಾರೆ. ಗೋವಾದ ಪಿರ್‌ಮಾವ್ರೋ ಗ್ರಾಮದಲ್ಲಿ ಮಧ್ಯಪ್ರದೇಶದ ಉಜ್ಜಯನಿ, ಬಿಹಾರದ ಛೋಟಾನಾಗಪುರ ಗಳಲ್ಲಿ ಬೆಂಕಿ ನೃತ್ಯ ಮಾಡುವರು.

ಕರ್ನಾಟಕದ ಕರಾವಳಿಯಲ್ಲಿ ಹಾಲಕ್ಕಿ ಒಕ್ಕಲಿಗರು, ದಕ್ಷಿಣ ಕನ್ನಡದ ಆದಿವಾಸಿಗಳಾದ ಕುಡುಬಿಯರು, ತಲೆಗೆ ಮುಂಡಾಸು ಬಿಗಿದು ಬಣ್ಣಬಣ್ಣದ ಹಕ್ಕಿ ಗರಿಗಳನ್ನು ಸಿಕ್ಕಿಸಿ, ಸುರಗಿಯ ಹೂಗಳ ಸರ ಬಿಗಿದು ವೇಷ-ಭೂಷಣ ತೊಟ್ಟು 'ಹೋಳಿಕುಣಿತ' ಮಾಡುವರು. ಲಂಬಾಣಿ ಜನಾಂಗ (ಸುಕಾಲಿಗರು) ಈ ಹಬ್ಬವನ್ನು ವಿಶೇಷವಾಗಿ ವಿಶಿಷ್ಟವಾಗಿ ಕ್ರಮಬದ್ಧವಾಗಿ ಆಚರಿಸುತ್ತಾರೆ. ಅಂದಿನ ಅವರ ಕೋಲಾಟದ -ಕುಣಿತ ಹಾಡುಗಳೊಂದಿಗೆ ವೈಷಿಷ್ಟ್ಯಪೂರ್ಣವಾದದ್ದು.

'ಅನಂಗ'ನಾದ ಕಾಮ ಎಲ್ಲ ಜೀವಿಗಳಲ್ಲಿಯೂ ನೆಲೆಸಿದ್ದಾನೆ. ಸೃಷ್ಟಿಗೆ ಕಾರಣನಾದ, ಕಾಮ ಬರಿಯ ಕಾಮ ವಾಗಬಾರದು. ಕಾಮ ಪ್ರೇಮದಿಂದ ಕೂಡಿರಬೇಕು. ಆಗ ಅದು ಶಿವಾರ್ಪಿತವಾಗುವುದು. ಸೃಷ್ಟಿ ಕ್ರಿಯೆ ಆಗಬಲ್ಲುದು. ಸಾಮಾನ್ಯ ರತಿ ಶಿವರತಿಯಾಗಬೇಕು. ಬೆಂಕಿ ಯಜ್ಞದ ಸಂಕೇತ. ಮನುಷ್ಯನ ಕೆಟ್ಟ ಭಾವನೆಗಳನ್ನು, ಕಾಮನೆಗಳನ್ನು, ಆಶೆಗಳನ್ನು ಬೆಂಕಿಗೆ ಸಮರ್ಪಿಸುವುದು ಈ ಹಬ್ಬದ ಅಂತರಾರ್ಥ.

## ಶುಭದ ಪ್ರಕಾಶನದ ಪ್ರಕಟಣೆ
## ೩ನೇ ರಾಜ್ಯಮಟ್ಟದ ಕಾವ್ಯ ಕಮ್ಮಟ

ಕಾವ್ಯ ಪ್ರಕಾರಗಳ ಮತ್ತು ಕಾವ್ಯ ಪರಂಪರೆಯ ಕುರಿತು ಉಪನ್ಯಾಸ ನೀಡಲು ನಾಡಿನ ವಿವಿಧ ಕ್ಷೇತ್ರಗಳ ವಿದ್ವಾಂಸರನ್ನು, ಪಂಡಿತರನ್ನು, ಪ್ರಾಧ್ಯಾಪಕರುಗಳನ್ನು ಆಹ್ವಾನಿಸಲಾಗಿದೆ. ಪ್ರೊ. ಕಿ.ರಂ. ನಾಗರಾಜ ಅವರು ಈ ಬಾರಿಯ ಕಮ್ಮಟದ ನಿರ್ದೇಶಕರಾಗಿರುತ್ತಾರೆ. ಎರಡು ದಿನಗಳ ಕಾಲ (29 ಮತ್ತು 30ನೇ ಮಾರ್ಚ್ 2008) ನಡೆಯಲಿರುವ ಈ ಕಾವ್ಯ ಕಮ್ಮಟದಲ್ಲಿ ಭಾಗವಹಿಸಲು ಇಚ್ಛೆವುಳ್ಳವರು ತಮ್ಮ ಒಂದು ಭಾವಚಿತ್ರವನ್ನು ತಾವು ರಚಿಸಿರುವ ಎರಡು ಕವಿತೆಗಳನ್ನು, ಸ್ವವಿಳಾಸದ ಅಂಚೆ ಲಕೋಟೆಯನ್ನು ಹಾಗೂ ಕಿರುಪರಿಚಯವನ್ನು ಆಯ್ಕೆಗಾಗಿ ಕೆಳಕಂಡ ವಿಳಾಸಕ್ಕೆ ಕಳುಹಿಸಲು ಕೋರಲಾಗಿದೆ.

ಊಟ ಮತ್ತು ವಸತಿಯ ಉಚಿತ ಸೌಕರ್ಯವನ್ನು ನೀಡಲಾಗುವುದು.

**ಸಂಪರ್ಕಿಸುವ ವಿಳಾಸ:**
**ಜರಗನಹಳ್ಳಿ ಶಿವಶಂಕರ್(9448356850)**
**ಹಾಗೂ ಎಸ್.ಸಂಜಯ್ (9845566138)**
ಸಂಚಾಲಕರು, ಶುಭದ ಪ್ರಕಾಶನ,
ಜರಗನಹಳ್ಳಿ, ಜೆ.ಪಿ. ನಗರ ಅಂಚೆ,
ಬೆಂಗಳೂರು- 560 078. ದೂ: 080-26646850.

## ವಚನಗಳು

ಹರಿವ ನದಿಗೆ ಮೈಯೆಲ್ಲ ಕಾಲು. ಉರಿವ ಕಿಚ್ಚಿಗೆ ಮೈಯೆಲ್ಲ ಬಾಯಿ. ಬೀಸುವ ಗಾಳಿಗೆ ಮೈಯೆಲ್ಲ ಕೈ. ಇದು ಕಾರಣ, ಗೊಹೇಶ್ವರ, ನಿಮ್ಮ ಶರಣಂಗೆ ಸರ್ವಾಂಗವೆಲ್ಲ ಲಿಂಗಮಯವಯ್ಯ

-ಅಲ್ಲಮಪ್ರಭು

* * *

ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದರೆ ಆ ತೃಣವನಾ ಕೆಂಡ ನುಂಗಿದಂತೆ, ಗುರುಚರಣದ ಮೇಲೆ ತನುವೆಂಬ ತೃಣವ ತಂದಿರಿಸಿದರೆ ಆತನ ಸರ್ವಾಂಗವೆಲ್ಲ ಲಿಂಗ ಕಾಣಾ ರಾಮನಾಥಾ

-ದೇವರ ದಾಸಿಮಯ್ಯ





# ಜಾಗತಿಕ ಶಿಕ್ಷಣ

-ಶಿವಾನಂದ ಕಲ್ಲೂರ, ಡಿ.ಎಸ್.ಇ.ಆರ್.ಟಿ ಕಛೇರಿ, 100 ಅಡಿ ವರ್ತುಲ ರಸ್ತೆ, ಹೊಸಕೆರೆ ಹಳ್ಳಿ, ಬನಶಂಕರಿ 3ನೇಹಂತ, ಬೆಂಗಳೂರು.

ಜಾಗತೀಕರಣದ ಬಗ್ಗೆ ನಮ್ಮ ಸುತ್ತಮುತ್ತಲ ಪರಿಸರ ದಲ್ಲಿ ಯಾವ ಪರಿಯ ಸಂತಸ ಸಂಶಯಗಳು ಜಾರಿಯಲ್ಲಿವೆ ಎಂಬುದನ್ನು ತಿಳಿದಿದ್ದೇವೆ. ಕನಿಷ್ಠ ನನ್ನ ಅಭಿಪ್ರಾಯವನ್ನು ತಿಳಿಸುವ ಪ್ರಯತ್ನ ಮಾಡುತ್ತೇನೆ. 'ಜಾಗತೀಕರಣ' ಎಂಬುದು ಹೊಸ ಆವಿಷ್ಕಾರಗಳಾದ 'ಮಾಹಿತಿ ತಂತ್ರಜ್ಞಾನ', 'ಮುಕ್ತ ಮಾರುಕಟ್ಟೆ' ಮತ್ತು ಸ್ಥಳ, ಸಮಯ, ಗಡಿಗಳನ್ನು ಮೀರಿದ ವಿಶ್ವಗ್ರಾಮದ ಪರಿಕಲ್ಪನೆಯ ಬಹುಮುಖೀ ಪ್ರಕ್ರಿಯೆ. ಇದಲ್ಲದೆ ಎಂದಿಗಿಂತಲೂ ಹೆಚ್ಚು ಕ್ಷಿಪ್ರವಾಗಿ, ಆಳವಾಗಿ ಪರಸ್ಪರ ಸಂಬಂಧ ಬೆಸೆಯುವ ಕಾರ್ಯ ಕೂಡಾ ಹೌದು.

ಜಾಗತೀಕರಣದಿಂದ ನಮ್ಮ ಸಮಾಜದ ಬದುಕಿನ ಶೈಲಿ. ಸಾಂಸ್ಕೃತಿಕ ಜೀವನವು ಬಹುಸಂಸ್ಕೃತಿಯತ್ತ, ಅಂತರ್ ಸಂಸ್ಕೃತಿ ಸಂವಾದ-ಸಂವಹನಗಳಿಗೆ ವೇದಿಕೆಯಾಗುತ್ತಿದೆ. ಇವಲ್ಲದೆ ನಮ್ಮ ಜೀವನ ಶೈಲಿಯ ವಿಧಾನಗಳು, ಶಿಕ್ಷಣ, ಅಭಿವೃದ್ಧಿ ಪ್ರಕಲ್ಪಗಳು ತಮ್ಮ ಗತಿಯನ್ನು ಬಹುಸಂಸ್ಕೃತಿಗಳ ಅವಶ್ಯಕತೆಯಂತೆ ಮಾರ್ಪಾಡಾಗುತ್ತಿವೆ. 20ನೆಯ ಶತಮಾನದಲ್ಲಿ 'ಎಲ್ಲರಿಗೂ ಶಿಕ್ಷಣದ ಹಕ್ಕು' ಪ್ರಧಾನ ಅಂಶವಾಗಿದೆ. ಈ ಶತಮಾನದಲ್ಲಿ ಮುಖ್ಯ ಹೋರಾಟದ ಕೇಂದ್ರ ಬಿಂದು ಎಲ್ಲರಿಗೂ ಶಿಕ್ಷಣ ನೀಡುವ ಉದ್ದೇಶದ ಬಗ್ಗೆ ಆಗಿರುತ್ತದೆ.

**ಜಾಗತೀಕರಣ ಮತ್ತು ಶಿಕ್ಷಣ :**

ಜಾಗತಿಕ ಪ್ರವೃತ್ತಿ ಶಿಕ್ಷಣದ ಮೇಲೆ ಹೇಗೆ ಪ್ರಭಾವ ಬೀರಬಲ್ಲದು? ಆಂಶಿಕವಾಗಿ ಈ ಪ್ರಶ್ನೆಗೆ ಉತ್ತರ ಇಂದಿನ ಶಿಕ್ಷಣ ಯೋಜನೆಗಳು ಜಾರಿಯಾಗುತ್ತಿರುವ ರೀತಿಯಲ್ಲಿದೆ. ಶಿಕ್ಷಣ ಕಾರ್ಯ ಯೋಜನೆಗಳು ಸೂಕ್ತ ವಸ್ತು ವಿಷಯಗಳ ಸಲಕರಣೆಗಳಿಲ್ಲದೆ ಪರಿಣಾಮಕಾರಿ ಆಗಲಾರದು. ಸೂಕ್ತ ಶಿಕ್ಷಣ ವ್ಯವಸ್ಥೆಯ ಗೈರುಹಾಜರಿಯ ಸಂದರ್ಭಗಳಲ್ಲಿ ಶಿಕ್ಷಣ ಕ್ಷೇತ್ರವು ಖಾಸಗೀಕರಣವಾಗುತ್ತಿದೆ. ಶಿಕ್ಷಣ ಮತ್ತು ತರಬೇತಿ ಕೇಂದ್ರಗಳು ಇಂದು ಉತ್ತರ ಅಮೇರಿಕಾದ ಎರಡನೆಯ ದೊಡ್ಡ ಉದ್ಯಮವಾಗಿ ರೂಪುಗೊಂಡಿದೆ. ನಮ್ಮೆಲ್ಲ ಶಿಕ್ಷಣ ನಾಲ್ಕನೆಯ ಸ್ಥಾನ ಪಡೆದುಕೊಂಡಿದೆ.

ಈ ಜಾಗತೀಕರಣ ಪ್ರವೃತ್ತಿ ಮುಂದುವರೆದಲ್ಲಿ, ಶಿಕ್ಷಣದ ಕ್ಷೇತ್ರದ ಸೇವೆ ಮತ್ತು ಸಾಮಗ್ರಿಗಳಲ್ಲಿ ವಾಣಿಜ್ಯೀಕರಣದ ಪ್ರಭಾವ ಹೆಚ್ಚಾಗಲಿದೆ, ಶಿಕ್ಷಣವು ಜಾಗತೀಕರಣವಾಗಲಿದೆ. ಬಂಡವಾಳಶಾಹಿ ಪ್ರಕಾಶಕರು, ಕೃತಿ ಮಾರಾಟ ಮಾಡು ವುದಕ್ಕಿಂತ ಹೆಚ್ಚಾಗಿ ಸ್ಥಳೀಯ ಪ್ರಕಾಶಕರಿಗೆ ಮಾರುಕಟ್ಟೆ ಸಹಾಯ ನೀಡುವಲ್ಲಿ ಮುಂದಾಗಿದ್ದಾರೆ. ನೂತನ ಸಂಶೋಧನಾ ಸಂಸ್ಥೆಗಳು ಇದೇ ಜಾಡನ್ನು ಹಿಡಿದಿವೆ.

**'ಎಲ್ಲರಿಗೂ ಶಿಕ್ಷಣದ ಹಕ್ಕು- ಜಾಗತೀಕರಣ':**

ಎಲ್ಲರಿಗೂ ಶಿಕ್ಷಣ ನೀಡುವ ಯೋಜನೆ, ಕೆಲೆವೆಡೆ ಶಸ್ತ್ರಾಸ್ತ್ರ ಹೋರಾಟಗಳು, ಸಾಲದ ಹೊರೆ, ಮಿತಿ ಮೀರಿದ ಜನಸಂಖ್ಯೆಗಳ ಪ್ರಭಾವಕ್ಕೊಳಗಾಗುತ್ತಿದೆ. ಆತಂಕದ ವಿಷಯ ವೆಂದರೆ, ಜಗತ್ತಿನ ಬಡ ರಾಷ್ಟ್ರಗಳಲ್ಲಿ ಮಧ್ಯವೇ ಶಾಲೆಯಿಂದ ಹೊರಬಿದ್ದ ಮಕ್ಕಳ ಸಂಖ್ಯೆ ಅತಿ ವೇಗವಾಗಿ ಮೇಲೇರುತ್ತಿದೆ. ಆಫ್ರಿಕಾದ ಖಂಡದಲ್ಲಿ ಈ ಪ್ರಕ್ರಿಯೆ ಆತಂಕಕಾರಿ ಹಂತವನ್ನು ತಲುಪಿದೆ.

ಬಡವರಿಗೆ ನೀಡಲಾಗುತ್ತಿರುವ ಶಿಕ್ಷಣದಲ್ಲಿ ಸಂಪನ್ಮೂಲ, ಪೂರಕ ಸಾಮಗ್ರಿಗಳ ಕೊರತೆಯ ಹಿನ್ನಲೆ ಯಲ್ಲಿ ಬಲಿಪಶುಗಳು ಬಡರಾಷ್ಟ್ರಗಳ ವಿದ್ಯಾರ್ಥಿಗಳು. ಜಾಗತಿಕ ಶಕ್ತಿಗಳು ತಮ್ಮ ಪ್ರಭಾವವನ್ನು ಸಂಪನ್ಮೂಲ- ಸಾಮಾಗ್ರಿಗಳ ವಿತರಣೆಗೆ ಒದಗಿಸದಿದ್ದಲ್ಲಿ ಮತ್ತು ಈ ರಾಷ್ಟ್ರಗಳ ಆಂತರಿಕ ಪರಿಸ್ಥಿತಿ ಇನ್ನಷ್ಟು ಬಿಗಡಾಯಿಸುವುದು.

**ಉನ್ನತ ಶಿಕ್ಷಣದಲ್ಲಿ ಜಾಗತೀಕರಣದ ಪ್ರಭಾವ :**

ಇಂದು ಜಾಗತಿಕ ಸಂಪನ್ಮೂಲವು ಉದ್ಯಮ ಸಂಪನ್ಮೂಲಗಳ ಮೇಲೆ ಹೆಚ್ಚು ಕೇಂದ್ರಿತವಾಗಿದೆ. ಜ್ಞಾನ ಮತ್ತು ನೈಪುಣ್ಯತೆಗಳ ಮೇಲೆ ಕೇಂದ್ರಿತವಾಗಿದೆ. ಭಾರತದಲ್ಲಿ ಮಾನವ ಸಂಪನ್ಮೂಲ ಬಂಡವಾಳಕ್ಕಿಂತ ಮೂರು ಪಟ್ಟು ಹೆಚ್ಚು ಪ್ರಾಮುಖ್ಯತೆ ಪಡೆದಿದೆ. ಕ್ಷಿಪ್ರವಾಗಿ ಬದಲಾಗುತ್ತಿರುವ 21ನೆಯ ಶತಮಾನದ ಬದುಕಿನಲ್ಲಿ ಮತ್ತು ಕಲಿಯುವ ಪ್ರಕ್ರಿಯೆ ಮತ್ತು ಉನ್ನತ ಶಿಕ್ಷಣದ ಅವಶ್ಯಕತೆ ಹಿಂದೆಂದಿ ಗಿಂತಲೂ ಹೆಚ್ಚು ಆವಶ್ಯಕವಾಗಿದೆ. ಉನ್ನತ ಶಿಕ್ಷಣದ ಬೇಡಿಕೆ ನಿರಂತರವಾಗಿ ಬೆಳೆಯುತ್ತಿರುವ ಹಿನ್ನಲೆಯಲ್ಲಿ ಕೇವಲ ಸಂಖ್ಯಾ ಬೆಳವಣಿಗೆ ವೃದ್ಧಿಸಿದೆಯೇ ಹೊರತು

ಸಮಪ್ರಮಾಣದಲ್ಲಿ ಸಂಪನ್ಮೂಲ ವಿನಿಯೋಗವು ಕಂಡು ಬರುತ್ತಿಲ್ಲ. ಬಹಳ ರಾಷ್ಟ್ರಗಳಲ್ಲಿ ಸಾರ್ವಜನಿಕ ಮತ್ತು ಖಾಸಗಿ ಕ್ಷೇತ್ರಗಳಲ್ಲಿ ನಡೆಯುತ್ತಿರುವ ವಿಸ್ತರಣೆಗಳು ವಿವೇಚನಾರಹಿತವಾಗಿ, ಯಾವುದೇ ಯೋಜನೆಯಿಲ್ಲದೆ, ಕಡಿವಾಣವಿಲ್ಲದೆ ಬದಲಾವಣೆಗಳ ಪರಿಣಾಮ ಗುಣಮಟ್ಟದ ಕೊರತೆ, ಅಂತರ ಪ್ರಾದೇಶಿಕ, ರಾಷ್ಟ್ರೀಯ, ಅಂತರಾಷ್ಟ್ರೀಯ ಮಟ್ಟಗಳಲ್ಲಿ ಗುಣಮಟ್ಟದಲ್ಲೇ ಏಕರೂಪತೆಯ ಕೊರತೆ, ಲಾಭಕೋರತನಗಳು ಅಭಿವೃದ್ಧಿಶೀಲ ರಾಷ್ಟ್ರಗಳ ಮೇಲೆ, ತೃತೀಯ ಜಗತ್ತಿನ ಜಗತ್ತಿನ ಮೇಲೆ ಹಾಗೂ ವಿಶ್ವವಿದ್ಯಾಲಯ ಪರಿಕಲ್ಪನೆಗೆ ಮತ್ತು ಉನ್ನತ ಶಿಕ್ಷಣ ಮೇಲೆ ಆತಂಕಕಾರಿ ಪರಿಣಾಮಗಳನ್ನು ಮಾಡಬಲ್ಲವು.

ಉನ್ನತ ಶಿಕ್ಷಣ ವಿಶ್ವಸಂಘಟನೆಯ ಈ ಬಗ್ಗೆ ನಿರ್ದಿಷ್ಟ ಮಾನದಂಡವನ್ನು ರೂಪಿಸುವ ಪ್ರಯತ್ನ ಮಾಡುತ್ತಿದೆ ಮತ್ತು 21ನೆಯ ಶತಮಾನದ ನಿರೀಕ್ಷೆಗಳನ್ನು ಪೂರೈಸುವ ಮಟ್ಟದಲ್ಲಿ, ಮಾನವ ಜನಾಂಗವನ್ನು ಮತ್ತು ವಿಶ್ವವನ್ನು ಸುಂದರ ಭವಿಷ್ಯದೆಡೆ ಕರೆದೊಯ್ಯುವ ಯೋಜನೆ ರೂಪುಗೊಳ್ಳಬೇಕು. ಶಾಂತಿಪ್ರಿಯ, ಜಾಗೃತಿ, ಮಾನವೀಯತೆ ಯುಳ್ಳ ಮತ್ತು ನ್ಯಾಯಬದ್ಧವಾದ ಸಮಾಜವನ್ನು ರೂಪಿಸುವ ನಿಟ್ಟಿನಲ್ಲಿ ಕೆಲವು ನಿರ್ದಿಷ್ಟ ಸೂತ್ರ ಹಾಗೂ ನಿಯಮಗಳನ್ನು ರೂಪಿಸಬೇಕು. ಈ ಬಗ್ಗೆ ಸಂಘಟನೆಯು ಸಂಶೋಧನೆ ಮತ್ತು ಸಂಪ್ರದಾಯಿಕ ಸಂಶೋಧನೆ ಮತ್ತು ತಜ್ಞ ಶಿಕ್ಷಣ ಯೋಜನೆಗಳನ್ನು ಶಕ್ತಿಯುತಗೊಳಿಸುವ ಬಗ್ಗೆ ಚರ್ಚಿಸಲಾಯಿತು. 21ನೆಯ ಶತಮಾನದಲ್ಲಿ ಅಂತರ ರಾಷ್ಟ್ರೀಯ ಮತ್ತು ಅಂತರ್ ಸಂಸ್ಕೃತಿ ಬಗ್ಗೆ ಜಾಗೃತಿ ಮೂಡಿಸುವ ಬಗ್ಗೆ ಸಹಾ ಗಮನವೀಯಲು ತೀರ್ಮಾನಿಸಲಾಯಿತು.

ಜಾಗತೀಕರಣದ ಫಲವಾಗಿ ಉನ್ನತ ಶಿಕ್ಷಣಕ್ಕೆ ಎಲ್ಲಿಲ್ಲದ ಬೇಡಿಕೆ. ಆದರೆ ಸರಕಾರಗಳು ಈ ಬಗ್ಗೆ ಅನುಕೂಲತೆ ಮತ್ತು ಸಹಾಯ ಹಸ್ತ ನೀಡಲು ಆಸಕ್ತವಾಗಿಲ್ಲ ಅಥವಾ ಅಶಕ್ತವಾಗಿವೆ. ಆದರೆ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಬಹಳ ಬೆಳವಣಿಗೆಯಾಗಿದೆ. ಈ ಕ್ರಮದಲ್ಲಿ ವಿಶ್ವಾದ್ಯಾಂತ ವಿಶ್ವವಿದ್ಯಾಲಯಗಳು ಸಂಪನ್ಮೂಲ ಮತ್ತು ಅನಕ್ಷರತೆ ಕೊರತೆಯಿಂದ ಬಳಲುತ್ತಿವೆ. ಸಾಗರೋತ್ತರ ವಿದ್ಯಾರ್ಥಿಗಳು ಮತ್ತು ಸಾಂಸ್ಕೃತಿಕ ತರಬೇತಿ ಸಂಸ್ಥೆಗಳನ್ನು ಗಮನದಲ್ಲಿ ಇರಿಸಿಕೊಂಡು ಸರಕಾರ ದೀರ್ಘಕಾಲದ ಪರಿಹಾರ ರೂಪಿಸಬೇಕು. ನಮ್ಮ ವಿಶ್ವವಿದ್ಯಾಲಯಗಳಲ್ಲಿ ಇರುವಂತಹ ಸಂಪನ್ಮೂಲದ ಬಗ್ಗೆ ಸಹಾ ಜಾಗೃತ ವಾಗಬೇಕು.

**ಜಾಗತೀಕರಣ ಮತ್ತು ಶಿಕ್ಷಣ ತರಬೇತಿ :**

ಶಿಕ್ಷಕ ತರಬೇತಿ ಬಗ್ಗೆ ಡೇರ್ಸ್ ವರದಿ(ಯುನೆಸ್ಕೋ 1996) ಒಂದು ಕಾರ್ಯ ಯೋಜನೆ ತಯಾರಿಸಿ, ತರಬೇತಿಯ ರೀತಿಯ ನೀತಿಯಲ್ಲಿ ಬಹಳಷ್ಟು ಬದಲಾವಣೆ ಗಳನ್ನು ಸೂಚಿಸಿದೆ. ಹೊಸ ಶಿಕ್ಷಕರನ್ನು ರೂಪಿಸುವಾಗ ಅವರಿಗೆ ಕೇವಲ ಜ್ಞಾನ, ನೈಪುಣ್ಯತೆ ಅಷ್ಟೇ ಅಲ್ಲದೆ ಮೌಲ್ಯ ಗಳನ್ನು ತಿಳಿಸಿಕೊಡಬೇಕು. ಇದು ಬೇರೆ ಬೇರೆ ಸಾಮಾಜಿಕ ಸಾಂಸ್ಕೃತಿಕ ಹಿನ್ನಲೆಯಿಂದ ಬರುವ ಸಮಾಜದ ಹಿಂದುಳಿದ ವಿದ್ಯಾರ್ಥಿಗಳಿಗೆ ಕಲಿಯುವ ಮತ್ತು ತಮ್ಮ ಅಂತರ ವಿರೋಧಗಳನ್ನು ಶಾಂತಿಯುತವಾಗಿ ಪರಿಹರಿಸು ವಲ್ಲಿ ನೆರವಾಗುತ್ತದೆ. ನಾಗರಿಕ ಸಮಾಜ ರೂಪುಗೊಳ್ಳುತ್ತದೆ. ಶಾಲೆಗಳಲ್ಲಿ ಪ್ರಸ್ತುತ ಇರುವ 'ನಾ ನುಡಿದಂತೆ ನಡೆ, ನಡೆದಂತೆ ಅಲ್ಲ' ಎಂಬ ಶಿಕ್ಷಕರ ಮಾದರಿ ಬದಲಾಗಿ ಶಿಕ್ಷಣ ಎನ್ನುವುದು ಹೆಚ್ಚು ಸಂವೇದನಾಶೀಲವಾದ, ಸಂಸ್ಕೃತಿ ಮತ್ತು ಮಕ್ಕಳ ಬದುಕಿನ ಬಳ್ಳಿಯೊಂದಿಗೆ ತಾದಾತ್ಮ್ಯ ಹೊಂದಿದ ಜೀವನಶೈಲಿ ಆಗಬೇಕು. ಸಮಾಜದ ವಿವಿಧ ಸ್ತರಗಳ, ಸಾಮಾಜಿಕ –ಸಾಂಸ್ಕೃತಿಕ ಹಿನ್ನಲೆ ಹೊಂದಿದ ವಿದ್ಯಾರ್ಥಿಗಳಲ್ಲಿ ದೀರ್ಘಕಾಲದ ಕ್ರಮಬದ್ಧ ಸಂದೇಶವನ್ನು, ನಿರ್ದೇಶನವನ್ನು ಮತ್ತು ಮಾರ್ಗಸೂಚಿ ಗಳನ್ನು ಒದಗಿಸುತ್ತದೆ.

ಶಿಕ್ಷಣ ಸಂಬಂಧಿ ಸಂಶೋಧನೆಗಳು, ವಿಧಾನಗಳು ಬದಲಾಗಬೇಕು ಮತ್ತು ಪ್ರಸ್ತುತ ಶಿಕ್ಷಣ ನೀಡುವ ವಿಧಿ ವಿಧಾನಗಳು ಪರಿವರ್ತನೆಯಾಗಬೇಕು. ಶಿಕ್ಷಣದ ವೇಳಾ ಪಟ್ಟಿ, ಸಲಕರಣೆಗಳು, ಸಮಾಜದ ತಾರತಮ್ಯ ಮತ್ತು ಮಿತಿಗಳನ್ನು ಮುನ್ನಡೆಸುವಲ್ಲಿ ನೆರವಾಗಬೇಕು. ಈ ಕೆಲವಾರು ಕ್ಷೇತ್ರಗಳಲ್ಲಿ ಬೆಳಕು ಚೆಲ್ಲಬೇಕು. ತಿಳಿಯದ ಹಲವಾರು ವಿಷಯ ಕ್ಷೇತ್ರಗಳಿವೆ. ಉದಾಹರಣೆಗೆ ಅಂತರ ರಾಷ್ಟ್ರೀಯ ಮತ್ತು ಸರಕಾರಿ ಯೋಜನೆಗಳ ಬಗ್ಗೆ ತಿಳುವಳಿಕೆ.

* ನಮ್ಮ ಬಹುಸಂಸ್ಕೃತಿ ಶಾಲೆ ವಿಶ್ವವಿದ್ಯಾಲಯಗಳ ಕಾರ್ಯ ವೀಕ್ಷಣೆ.
* ಶಿಕ್ಷಣ ವಿಧಾನಗಳು ಸಾಂಪ್ರದಾಯಿಕ ಮತ್ತು ಪರ್ಯಾಯ ಸಂಸ್ಕೃತಿ ಪರಿಚಯದಲ್ಲಿ.





* ಬೇರೆ ಬೇರೆ ಸಂಸ್ಕೃತಿಗಳ ಅಧ್ಯಯನ ಮತ್ತು ವಿರೋಧಾಭಾಸಗಳನ್ನು ಶಾಂತಿಯುತವಾಗಿ ಪರಿಹರಿಸಿಕೊಳ್ಳುವ ಬಗೆ.

21ನೆಯ ಶತಮಾನದ ಶಿಕ್ಷಣ ಯೋಜನೆಯ ಮತ್ತೊಂದು ಕಾರ್ಯಸೂಚಿಯಂದರೆ ಬೇರೆ ಬೇರೆ ಜೀವನ ವಿಧಾನಗಳ ಹಿನ್ನಲೆಯಿಂದ ಬಂದ ಶಿಕ್ಷಣ ಮತ್ತು ಶಿಕ್ಷಣಾರ್ಥಿಗಳು ವಿನಿಮಯ ಯೋಜನೆಯ ಪರಿಣಾಮಗಳು ನಾಗರೀಕ ಶಿಕ್ಷಣ, ಸಂವಹನ ಪೂರ್ವದ ಮಲ್ಟಿಮೀಡಿಯ ಪ್ಯಾಕೇಜ್‌ಗಳು, ಅಂತರ್ ಸಂಸ್ಕೃತಿ ಒಳಹರಿವುಗಳ ಬಗ್ಗೆ ತಿಳಿಸಿಕೊಡುವ ಅಂತರ್ಜಾಲಗಳು, ವಿವಿಧ ಸಂಸ್ಕೃತಿ, ಜೀವನ ಶೈಲಿಯ ಹಿನ್ನಲೆಯಲ್ಲಿ ಬಂದ ಶಿಕ್ಷಣಾರ್ಥಿಗಳು ಶಿಕ್ಷಣಕ್ಕೆ ಸ್ಪಂದಿಸುವ ರೀತಿಗಳು ಶಾಲೆ-ವಿಶ್ವವಿದ್ಯಾಲಯ ಅಥವಾ ಸಮುದಾಯದಲ್ಲಿ ಕಂಡುಬರುವ ಪ್ರತಿಫಲನಗಳು ಸಂಶೋಧನಾರ್ಹ.

**ಶಿಕ್ಷಣ ವ್ಯವಸ್ಥೆ ಬೆಳೆಯುತ್ತಿರುವ ಸಾಂಸ್ಕೃತಿಕ ವೈವಿಧ್ಯತೆಗಳನ್ನು ಹೇಗೆ ಪ್ರತಿಕ್ರಿಯಿಸಬೇಕು :**

ನಮ್ಮ ರಾಷ್ಟ್ರದಲ್ಲಿ ವಿಶೇಷವಾಗಿ ನಮ್ಮ ಬೆಂಗಳೂರಿನಲ್ಲಿ ಶಿಕ್ಷಣದ ಪ್ರಮುಖ ಕಾರ್ಯ, ಸುಸಂಗತ ಸಮಾಜದ ನಿರ್ಮಾಣದಲ್ಲಿ ಆಗಿದೆ. ಸಾಂಸ್ಕೃತಿಕ ಮೌಲ್ಯಗಳ ವಿನಿಮಯ, ಬೆಳವಣಿಗೆಗಳ ಮತ್ತು ಅವುಗಳ ವಿಧಿ ವಿಧಾನಗಳು ನಮಗೆ ನೆರವಾಗಿವೆ. ಆರ್ಥಿಕ ಬೆಳವಣಿಗೆ ನಮ್ಮ ಸರಕಾರಿ ನೀತಿ ನಿರೂಪಣೆಯ ಮೇಲೆ ಪ್ರಭಾವ ಬೀರುತ್ತಿದೆ. ಈ ಸಂದರ್ಭ ದಲ್ಲಿ ಸಮಾಜದ ಸುಸಂಗತಿಯನ್ನು ಉಳಿಸಿಕೊಳ್ಳುವ ಜವಾಬ್ದಾರಿ, ಸಮಾಜದ ಬಗ್ಗೆ ಸಂಸ್ಕೃತಿಗಳನ್ನು ಹೊಂದಿದ್ದಾಗ, ಶಿಕ್ಷಣದ ಮೇಲೆ ಹಿಂದೆಂದಿಗಿಂತಲೂ ಹೆಚ್ಚಾಗಿದೆ.

ಐತಿಹಾಸಿಕವಾಗಿ ಕನಿಷ್ಠ ಈ ನಾಲ್ಕು ವಿಧಾನಗಳಲ್ಲಿ ಸಂವಹನ ಸಾಂಸ್ಕೃತಿಕ ವೈವಿಧ್ಯತೆಯಲ್ಲಿ ಗಮನಿಸಲಾಗಿದೆ.

ಅ. ಏಕರೂಪತೆ : ಏಕರೂಪ ರಾಷ್ಟ್ರೀಯತೆಯನ್ನುಜಾರಿಗೊಳಿಸುವುದು.

ಆ. ಲೀನವಾಗುವಿಕೆ : ನಿಧಾನವಾಗಿ ರಾಷ್ಟ್ರೀಯ ಸಂಸ್ಕೃತಿಯನ್ನು ಜಾರಿಗೊಳಿಸುವುದು

ಇ. ಬೇಧಾತ್ಮಕ : ಏಕರೂಪ ರಾಷ್ಟ್ರೀಯತೆಯನ್ನು ಹೊಂದುವುದು. ಆದರೆ ವಿಭಿನ್ನ, ವಿಭಿನ್ನ ಸಂಸ್ಕೃತಿಗಳ ನಡುವೆ ಸಂವಹನವನ್ನು ಹ್ರಸ್ವಗೊಳಿಸುವುದು.

ಈ. ಬಹುಸಂಸ್ಕೃತಿ : ಅನೇಕತೆಯಲ್ಲಿ ಏಕತೆಯನ್ನು ತರುವುದು.

ಜಾಗತೀಕರಣದ ಹಿನ್ನಲೆಯಲ್ಲಿ, ನಾವೆಲ್ಲರೂ ವಿವಿಧತೆಯನ್ನು ಗೌರವಿಸುವ, ಸಾಮಾಜಿಕ ಸುಸಂಗತಿ ಗಳನ್ನು ಕಾಪಾಡುವ ಮತ್ತು ವಿಶ್ವಮಾನ್ಯ ನೀತಿ ಮತ್ತು ಸಂಪ್ರದಾಯಗಳನ್ನು ಮುನ್ನಡೆಸಲು ಬದ್ಧರಾಗಬೇಕಿದೆ.

ಹೀಗೆ ಜಾಗತೀಕರಣ ದೇಶದ ಬೆಳವಣಿಗೆಯಲ್ಲಿ ತನ್ನದೇ ಆದ ರೀತಿಯನ್ನು ಸಕಾರಾತ್ಮಕವಾಗಿ ಮತ್ತು ನೇತ್ಯಾತ್ಮಕವಾಗಿ ತನ್ನ ಪ್ರಭಾವ ಬೀರುತ್ತಿದೆ. ಸಹಜವಾಗಿಯೇ ಶಿಕ್ಷಣ ಸಹಾ ಈ ಪ್ರಭಾವಗಳಿಗೆ ಹೊರತಾಗಿಲ್ಲ.

☆

**ತುಮಕೂರಿನ ಸಿದ್ಧಗಂಗೆಯ ಶ್ರೀಗಳಿಗೆ**

ಸಿದ್ಧಗಂಗೆಯ ಸೆಲೆಯ ಚಿಮ್ಮಿದಿರಿ ನೀವಿಲ್ಲಿ
ಅರಿವೇ ಗುರುವಿನ ಪದಕಮಲದ ಅಭಿಷೇಕಕೆ,
ಅನ್ನ ದಾಸೋಹದ ಜೊತೆ ಅರಿವಿನ ಬಾಗಿಲನು
ತೆರೆದಿರಿ; ಸರ್ವರನು ಬಳಿಗೆ ಕರೆದ ಶತಾಯುಷಿ
ಸರ್ವೋದಯದ ಹೊಂಗನಸು ಫಲಿಸಿ ತಾನರಳಿ
ಸಿದ್ಧಲಿಂಗೇಶ್ವರರ ಕೃಪೆಯ ಬುಗ್ಗೆ ಹರಿಸಿದೆ ;
ತುಮಕೂರ ಸಿದ್ಧಗಂಗಾ ಹೆಸರು ಈ ನಾಡ –
ಮನೆಮನೆಯ ತುಂಬ; ಹೊಳೆ ಹೊಳೆದ
ಕೀರ್ತಿಸ್ತಂಭ

ನೀವು ನಿಂತ ಅಡಿ ಎಡೆ ವಿದ್ಯೆ ಗುಡಿ ಮಕರಂದ
ನುಡಿ ಶರಣ ತತ್ವದ ಜೇನು; ತಿಳಿ ನೋಟ ಚಂದ
ನಿಮ್ಮ ಕಾಯಕ ನಿಷ್ಠೆಗದು ಸಂದ ಪ್ರಶಸ್ತಿ
ಕರ್ನಾಟಕ ರತ್ನ; ದಿನ ನಿಶಿ ನಿಮ್ಮ ದುಡಿಮೆಯತ್ತ
ಶ್ರೀ ಶಿವಕುಮಾರಯೋಗಿ ಪೂಜ್ಯರೆಮಗೆ
ಇಳೆಗೆ ಕರುನಾಡ ಶರಣ ಕರುಣೆ ಕಲ್ಪವೃಕ್ಷ.

–ಎಂ.ಜಿ. ಗಂಗನಪಳ್ಳಿ
ನಿವೃತ್ತ ಮುಖ್ಯೋಪಾಧ್ಯಾಯರು,
ಎಸ್.ಬಿ.ಐ. ಹೌಸಿಂಗ್ ಕಾಲೋನಿ,
ಬೀದರ್–585 403

# ನಮ್ಮದೆಂಬುದು ನಮಸ್ಕಾರ ಮಾತ್ರ ಅರ್ಪಿಸಲು ಇರುವಂತಹದ್ದು

–ಎಂ. ಮಾಧವ ಪೈ, ನಿವೃತ್ತ ಪ್ರಾಂಶುಪಾಲರು, ಶ್ರೀನಿವಾಸ, ವಿ.ಎಸ್. ಹೈಸ್ಕೂಲ್ ಹತ್ತಿರ, 1ನೇ ಹಂತ, ಶಿವಮೊಗ್ಗ.

'ಸರ್ವಂ ವಸ್ತು ಭಯಾಸ್ವರಂ ಭುವಿ' –ಪ್ರಪಂಚದಲ್ಲಿ ಎಲ್ಲ ವಸ್ತುಗಳೂ ಭಯದಿಂದ ಕೂಡಿದೆ ಎಂಬೀ ಉಕ್ತಿ ಯಾವೊಂದು ಪ್ರಾಣಿಯು ಸುಖ ಸಂತೋಷದಿಂದಿಲ್ಲ ಎಂಬುದನ್ನು ಸೂಚಿಸುತ್ತದೆ. ಈ ಭಯಕ್ಕೆ ಇರುವ ಮೂಲ ಬದುಕಿ ಇರಬೇಕೆಂಬ ಆಸೆ. ತನ್ನ ಬದುಕಿಗೆ ಎಲ್ಲಿ ಕುತ್ತು ಬರುತ್ತದೋ ಎಂಬುದೇ ಭಯಕ್ಕೆ ಕಾರಣ. ಬದುಕಿನಲ್ಲಿ ಬರುವ ಆಪತ್ತು ವಿಪತ್ತುಗಳು ಈ ಭಯವನ್ನು ಇನ್ನೂ ಹೆಚ್ಚಿಸುತ್ತದೆ. ಕಷ್ಟಕೋಟಲೆಗಳು ಸದಾ ಪೀಡಿಸುತ್ತಿರುತ್ತವೆ. ದುಃಖದುಮ್ಮಾನಗಳು ಕಾಡುತ್ತಿರುತ್ತವೆ. ಇವೆಲ್ಲವೂ ಮಾನವನಿಗೆ ಹುಟ್ಟಿನಿಂದಲೇ ಜೊತೆ ಗೂಡಿ ಬಂದಿವೆಯೋ ಎಂಬಂತೆ ಸದಾ ಹಿಂಬಾಲಿಸಿಯೇ ಇರುತ್ತವೆ. ಮೇಲ್ನೋಟಕ್ಕೆ ಕೆಲವರು ಯಾವ ದುಃಖ ದುಮ್ಮಾನಗಳೂ, ಕಷ್ಟ ಕೋಟಲೆಗಳು ಇಲ್ಲದ ಸುಖಿಗಳು ಎಂದು ಕಂಡುಬಂದರೂ ಅಂತಹವರಿಗೂ ಒಳಗೊಳಗೇನೇ ಏನೋ ಕೊರಗು ಇದ್ದೇ ಇರುತ್ತದೆ. ಚಿಂತೆ ಆವರಿಸಿಕೊಂಡಿರುತ್ತದೆ. ಹೀಗಾಗಿ ನಿಶ್ಚಿಂತನೂ ಸುಖಿಯೂ ಆಗಿರುವವನು ಯಾರೊಬ್ಬನೂ ಇಲ್ಲ ಎಂದೇ ಹೇಳಬೇಕಾಗುತ್ತದೆ.

ತನಗೊದಗಿರುವ ಆಪತ್ತು–ವಿಪತ್ತುಗಳ ಕಾಲದಲ್ಲಿ ಅದರಿಂದ ಪಾರಾಗಲು ಏನೇನೋ ಪ್ರಯತ್ನಗಳನ್ನು ಮಾಡುತ್ತ, ಕೊನೆಗೆ ಈ ಪೀಡೆಯಿಂದ ಮುಕ್ತಿ ಹೊಂದಲು ಭಗವಂತನಿಗೆ ಶರಣು ಹೋಗಿ ಇದರಿಂದ ಪಾರು ಮಾಡು ಎಂದೂ ಇದರಿಂದ ಪಾರು ಮಾಡಿದರೆ ಇಂತಹದ್ದನ್ನು ನಿನಗೆ ಅರ್ಪಿಸುತ್ತೇನೆಂದು ವಾಗ್ದಾನ ಮಾಡುತ್ತಾನೆ, ಹರಕೆ ಹೊತ್ತುಕೊಳ್ಳುತ್ತಾನೆ.

ಆದರೆ ಏನನ್ನು ಆತನು ದೇವರಿಗೆ ಅರ್ಪಿಸುತ್ತೇನೆ. ಒಪ್ಪಿಸುತ್ತೇನೆಂದು ಹೇಳಿಕೊಳ್ಳುತ್ತಾನೋ, ಆ ಹೇಳಿಕೊಂಡಿರುವ ವಸ್ತು ನಿಜವಾಗಿಯೂ ಅದು ಆತನದ್ದಾಗಿದೆಯೋ? ಮೇಲ್ನೋಟಕ್ಕೆ ಆತನದ್ದು ಎಂದು ಕಂಡು ಬಂದರೂ ಆಳಕ್ಕಿಳಿದು ನೋಡಿದರೆ ಅದು ಆತನದ್ದೇ? ಪ್ರಶ್ನೆ ಕಾಡುತ್ತದೆ. ಅದು ಆತನದ್ದೇ ಆಗಿದ್ದರೆ, ಆತ ಅದನ್ನು ಹುಟ್ಟುವಾಗಿ ತಂದಿರಬೇಕಿತ್ತು. ಆದರೆ ಹಾಗೆ ತಂದುದೇನೂ ಇಲ್ಲ. ಹಾಗೆಯೇ ಬದುಕು ಮುಗಿಸಿ ಹೊರಟಾಗ ಅದನ್ನು ಜೊತೆಯಲ್ಲಿ ಒಯ್ಯುತ್ತಾನೋ? ಅದು ಇಲ್ಲ. ಬಂದಾಗ ತರಲಿಲ್ಲ ಹೋಗುವಾಗ ಒಯ್ಯಲಿಲ್ಲ. ಅಂದ ಮೇಲೆ ಅದು ಆತನದ್ದು ಹೇಗೆ ? ಅದು ಆತನದ್ದಾಗಿರಲು ಸಾಧ್ಯವಿಲ್ಲ ಎಂದ ಮೇಲೆ ಆತ ಕೊಡಬಹುದಾದುದು ಆತನದ್ದೇ ಆಗಿರುವುದೇನು? ಸರ್ವಶಕ್ತನಾದ ಆ ಶಿವನಿಗೆ ಈ ಹುಲುಮಾನವ ಅರ್ಪಿಸಬಹುದಾದು ಏನು? 'ಸರ್ವ ಪ್ರಕಾರೇಣ ಈಶ್ವರಂ ಶರಣಂ ವ್ರಜೇತ್' ಎಲ್ಲ ರೀತಿಯಲ್ಲೂ ಶಿವನಿಗೆ ಅನನ್ಯ ಶರಣಾಗತನಾಗು ಎಂದಂತೆ ಅನನ್ಯ ಭಕ್ತಿಯಿಂದ ಸಂಪೂರ್ಣ ಶರಣಾಗಿ ದೀರ್ಘ ದಂಡ ನಮಸ್ಕಾರವನ್ನು ಒಪ್ಪಿಸುವುದೇ ಅವನದ್ದೇ ಆಗಿರುವ ಸೊತ್ತು. ಗೀತೆಯಲ್ಲಿ ಹೇಳಿಲ್ಲವೆ– 'ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರತ' ಎಲ್ಲಿ ಧರ್ಮಕರ್ಮಗಳನ್ನು ಪೂರ್ಣವಾಗಿ ತ್ಯಜಿಸಿ, ಏಕಮೇವಾದ್ವಿತೀಯನಾದ ನನಗೆ ಶರಣಾಗು ಎಂದು ಭಕ್ತಿಭಂಡಾರಿ ಬಸವಣ್ಣನವರು ಹೇಳಿರಲಿಲ್ಲವೆ– ಒಮ್ಮೆ ಶರಣೆನ್ನಲವೋ ಎಲ್ಲ ಪಾತಕ–ಪಾಪಗಳೂ ಪರಿಹಾರವಾಗುವುವು ಎಂದು. ನಿಜ, ಪೂರ್ಣ ಶರಣಾಗತನಾಗಿ ಆತನಿಗೆ ಭಕ್ತಿಯುಕ್ತ ನಮಸ್ಕಾರವನ್ನಲ್ಲದೆ ಮತ್ತೇನನ್ನೂ ನಾವು ಕೊಡಲು ಸಮರ್ಥರಲ್ಲವೆಂಬುದನ್ನು ಈಶಾವಾಸ್ಯೋಪನಿಷತ್ತು ಸಾರುತ್ತದೆ–

*ಅಗ್ನೇನಯ ಸುಪಥ ಲಿಯೇ ಅಸ್ಮಾನ್*
*ವಿಶ್ವಾನಿ ದೇವಿ ವಯುನಾನಿ ವಿದ್ವಾನ್*
*ಯುಯೋಧ್ಯಸ್ಮತ್ ಜುಹುರಾಣಮೇನೋ*
*ಭೂಯಿಷ್ಠಾಂ ತೇ ನಮಃ ಉಕ್ತಿ ವಿಧೇಯ*

ಆಗ್ನಂತರ್ಗತ ಈಶನೇ ಜೀವಿಗಳಿಗೆ ಕೈಹಿಡಿದು ನಡೆಸು ಎಂದು ಪ್ರಾರ್ಥಿಸುವ ರೀತಿಯಲ್ಲಿರುವ ಈ ಮಂತ್ರ ಮನನ ಯೋಗ್ಯವಾಗಿದೆ. – ಹೇ ಅಗ್ನಿದೇವನೇ! ಕರ್ಮಫಲವನ್ನು ಅನುಭವಿಸಲು ನಮ್ಮನ್ನು ಉತ್ತಮ ದಾರಿಯಲ್ಲಿ ಕರಕೊಂಡು ಹೋಗು, ಹೇ ಭಗವಂತನೇ–ನೀನು ಎಲ್ಲ ಕರ್ಮಗಳನ್ನು ತಿಳಿದಿರುವನು. ಕೆಟ್ಟ ಕಾರ್ಯದಲ್ಲಿ ನಾವು ತೊಡಗದಂತೆ ಮಾಡು. ನಿನಗೆ ಮತ್ತೆ ಮತ್ತೆ ಸಾವಿರ ಸಲ ನಮಸ್ಕಾರವನ್ನು ಹೇಳುತ್ತೇನೆ. ಅಂದರೆ ಜಗದೊಡೆಯ(ಈಶ)ನಾಗಿರುವ ಅವನು ಎಲ್ಲ ಜ್ಞಾನಗಳನ್ನು ತಿಳಿದವನೂ ಆಗಿ ಇರುವ, ಕ್ರೀಡಾದಿ ಕಲ್ಯಾಣ ಗುಣ ವಿಶಿಷ್ಟನಾಗಿ ಇರುವ, ಅಗ್ನ್ಯಂತರ್ಗತವಾಗಿ ವಿಶಿಷ್ಟನಾಗಿ ಇರುವ ಅಗ್ನಿನಾಯಕ ದೇವನೇ, ನಮಗೆ ಮೋಕ್ಷಧನಕ್ಕಾಗಿ ಮುನ್ನಡೆಸಿಕೊಂಡು ಹೋಗು, ಅಲ್ಪನಾಗಿ ಮಾಡುವಂತಹ ಪಾಪಗಳನ್ನು ನಮ್ಮಿಂದ ಹೊರಹೋಗು. ನಿನಗೆ ಭಕ್ತಿ ಜ್ಞಾನಭರಿತ ನಮಸ್ಕಾರ ಎಂದು ಈ ನುಡಿಯನ್ನು ಸಮರ್ಪಿಸುತ್ತೇನೆ. ಅಂದರೆ ನಿನ್ನದೇ, ನಿನ್ನ ಅನುಗ್ರಹದಿಂದ ಉಂಟಾದುದು, ನನ್ನದಲ್ಲ ಎನ್ನುವ ಜ್ಞಾನ–ಭಕ್ತಿಯುಕ್ತ ನುಡಿಯನ್ನು ನಿನಗೆ ಸಮರ್ಪಿಸುತ್ತೇವೆ. ಎಷ್ಟು ಅರ್ಥಗರ್ಭಿತವಾಗಿದೆ ಈ ಮಂತ್ರ, ಮನನ ಮಾಡಬೇಕಾದುದಾಗಿದೆ.

ಅಗ್ನಿನಾಮಕ ಜಗದೀಶ, ನಿನಗೆ ಇಂತಹ ಶರಣಾಗತಿ ಪೂರ್ವಕ ನಮಸ್ಕಾರ ಎನ್ನುವ ನುಡಿ ಹೊರತು ಬೇರೆ ಏನನ್ನಾದರೂ ಸಮರ್ಪಿಸಲು ನಾವು ಶಕ್ತರೇ? ಬಾಹ್ಯದಲ್ಲಿ ಜಗದಂತರ್ಯಾಮಿಯಾಗಿ ನಮಗೆ ಸಕಲ ಸಾಧನ ಸಾಮಗ್ರಿ ನಿನ್ನಿಂದ ನಮಗೆ ಪ್ರಾಪ್ತವಾಗಿದೆ. ನಮ್ಮೊಳಗೆ ಅಂತರ್ಯಾಮಿಯಾಗಿ ಸದಾ ಸರ್ವದಾ ಅನಿಮಿತ್ತ ಬಂಧುವಾಗಿ, ಸುಜ್ಞಾನದಾಯಕವಾಗಿ ಸತ್ಕರ್ಮ ಪ್ರೇರಕನಾಗಿ, ಸನ್ಮಾರ್ಗದಲ್ಲಿ ನಡೆಯಿಸಿ, ಸಾಧನ ಪೂರ್ಣಗೊಳಿಸಿ, ನಿತ್ಯಾನಂದ ರೂಪವಾಗಿರುವ ಮೋಕ್ಷ ಪದವಿಗೆ ಅನುಗ್ರಹಿಸಿ ತಲುಪಿಸುವ ಕರುಣಾಸಾಗರವಾಗಿರುವ ನಿನಗೆ ಕೊಡಲು ನಮ್ಮದೇ ಎನ್ನುವುದು ಎಲ್ಲಿ ಇದೆ? ಆದ್ದರಿಂದ ನಿನಗೆ ನಾವೇನಾದರೂ ಕೊಡಲು ಶಕ್ತರು ಎಂದಾದರೆ ಕೃತಜ್ಞತಾಪೂರ್ವಕವಾದ ನಮಃ ನಮಃ ಎನ್ನುವ ನುಡಿಯೊಂದೇ. ಇಷ್ಟನ್ನು ಮಾತ್ರ ಇದನ್ನೇ ಸ್ವೀಕರಿಸಿ ಉದ್ಧರಿಸು ಪರಮಾತ್ಮಾ.

ಸರ್ವಶಕ್ತನಾದ ಹರನಿಗೆ ಅಲ್ಪಶಕ್ತನಾದ ನರ ತಾನೇನು ಅರ್ಪಿಸಬಲ್ಲ. ಮೊದಲೇ ಹೇಳಿದಂತೆ ಅರ್ಪಣೆ ಮಾಡಲು ಆತನ ಹತ್ತಿರ ಆತನದ್ದೇ ಎಂದು ಹೇಳುವಂತಹದ್ದೇನಿದೆ? ಹೌದಲ್ಲವೇ? ನಮ್ಮದು ಎನ್ನುವಂತಹದ್ದು ನಮ್ಮ ಹತ್ತಿರ ಇರುವುದೇನು? ನಮ್ಮದು, ನನ್ನದು ಎಂದು ನಾವು ಹೇಳುವ, ಎಲ್ಲರೂ ಗಂಟು ಕಟ್ಟಿ ಇಡುವ ಅಹಂಕಾರದಿಂದ ಮೆರೆಯುವಂತಹುದೆಲ್ಲ ಏನಿದೆ? ನಮ್ಮದು, ನಮ್ಮದು ಎಂದು ಹೇಳುವುದು, ಇರುವುದದು ನಿಜವಾಗಿಯೇ ನಮ್ಮದೇ? ಈಶಾವಾಸ್ಯಾಪನಿಷತ್ತಿನ ಮೊದಲ ಮಂತ್ರವೇ ಹೇಳುತ್ತದೆ–

*'ಈಶಾವಾಸ್ಯಮಿದಂ ಸರ್ವಂ*
*ಯತ್ಕಿಂಚ ಜಗತ್ಯಾಂ ಜಗತ್*
*ತೇನ ತ್ಯಕ್ತೇನ ಭುಂಜೀಥಾ*
*ಮಾಗೃಧಃ ಕಸ್ಯಸ್ವಿದ್ಧನಮ್'*

ಈ ಪ್ರಕೃತಿಯಲ್ಲಿ ಈ ಇಡೀ ಜಗತ್ತು ಜಗದೀಶನ ವಾಸಸ್ಥಾನವು (ಅವನದ್ದು) ಅವನಿಂದದತ್ತ ಸಾಮಾಗ್ರಿಯಿಂದ ಭೋಗವನ್ನು ಹೊಂದು(ಪಡೆ) ಅನ್ಯರಾರಧನವನ್ನು ಆಶಿಸಬೇಡ ಎಂದು ಹೇಳುವ ಈ ಮಂತ್ರದಲ್ಲಿ ನಾವು ಏನನ್ನು ಅನುಭವಿಸುತ್ತೇವೆಯೋ ಅವೆಲ್ಲವೂ ಅವನು ನಮಗೆ ನೀಡಿದುದು ಎಂದಿರುವಾಗ ನನ್ನದು ಎಂದು ಹೇಳುವಂತಹದ್ದು. ಇರುವುದು ಯಾವುದು? ಇರುವುದೆಲ್ಲ 'ನೀನಿತ್ತುದುದು' ಅಲ್ಲವೇ? ಹೀಗಿರುವಾಗ ನನ್ನದೆಂದು ನಿನಗೆ ಅರ್ಪಿಸಲು ನನ್ನಲ್ಲಿರುವುದೆಂದರೆ ಒಂದೇ ಒಂದು. ಅದೇ ಕೃತಜ್ಞತೆಯಿಂದ 'ಶರಣು, ಶರಣಯ್ಯ ನಮೋ ನಮೋ' ಎನ್ನುವ ಒಂದು ನುಡಿ ಮಾತ್ರ ಎಂದು ಪ್ರಾರ್ಥಿಸುವ ಮೇಲೆ ಉದ್ಧರಿಸುವ ಮಂತ್ರ ಎನಿತು ಅರ್ಥಗರ್ಭಿತವಾದುದಾಗಿದೆ ಎಂಬುದನ್ನು ವಿಸ್ತರಿಸಿ ಹೇಳುವುದೇ ಕಷ್ಟ, ಮಾತಿಗೆ ನಿಲುಕದಾಗಿದೆ. ತನು, ಮನ, ನಯನ ಈ ಮೂರನ್ನು ಆತನಿಗಾಗಿ ಮೀಸಲಿಟ್ಟು ವಾಸಿಸುವುದು ಮತ್ತು ಕೃಪೆಯಿಂದ ಕಾರುಣ್ಯವ ಮಾಡಯ್ಯ ಎಂದು ಬೇಡಿ ಒಪ್ಪಿಸುವ ನಮಸ್ಕಾರಕ್ಕಿಂತ ಮಿಗಿಲಾದುದೇನಿದೆ ನಮ್ಮಲ್ಲಿ!.

ಈ ಮಂತ್ರವನ್ನು ನಾವು ಆಂತರ್ಯದಲ್ಲಿ ಅನುಭವ ಮಾಡಿಕೊಳ್ಳಬೇಕಾದುದಾಗಿದೆ. ಚಿಂತನ–ಮನನ ಮಾಡಿದಷ್ಟೂ ಇದರ ಮುಚ್ಚಿರುವ ಒಂದೊಂದು ಎಳೆಯನ್ನು ಬಿಡಿಸಿದಷ್ಟು ಇದರೊಳಗೆ ಅಡಕವಾಗಿರುವ ಅರ್ಥ ನಮ್ಮ ಅಂತಃಕರಣವನ್ನು ಅರಳಿಸುತ್ತದೆ. ನಮ್ಮ ಸ್ವಾರ್ಥ ಅಹಂಕಾರವನ್ನು ಬೇರು ಸಹಿತ ಕಿತ್ತು ಎಸೆದು ಮನಸ್ಸನ್ನು ಪವಿತ್ರ ಮಾಡುತ್ತದೆ, ಬದುಕನ್ನು ಪಾವನ ಮಾಡುತ್ತದೆ ಎಂಬುದನ್ನು ಚಿಂತನ ಮಾಡಿ ತಿಳಿಯೋಣ.

ಈ ಮಂತ್ರದಲ್ಲಿ ನಮ್ಮ ಜ್ಞಾನ ಬಹುಮುಖೀ ಅಂದರೆ ಮನಸ್ಸು ಚಂಚಲ, ಗಳಿಗೆ ಗಳಿಗೆಯೂ ಬದಲಾಯಿಸುತ್ತ ಹೋಗುತ್ತದೆ. ಈಗ ಇರುವಂತೆ ಇನ್ನೊಂದು ಗಳಿಗೆಯಲ್ಲಿ ಇರುತ್ತದೆಯೆಂದು ಹೇಳಲು ಆಗುವುದಿಲ್ಲ. ಬಸವಣ್ಣನವರು ಹೇಳಿಯೇ ಇದ್ದಾರಲ್ಲ– 'ಏನಿದ್ದರೇನಿದ್ದರೊಲ್ಲದು ನಿಮ್ಮನು ಭಾವಕ್ಕೆ ಮನವು' ಏಕೆಂದರೆ

ನಾನಾ ದೆಸೆಗೆ ಲಂಘಿಸಿ ಬಳಲಿಸಿ ಬಳಲಿಸುತ್ತಿರುವ ಈ ಮನಸ್ಸು

*'ನಿಂದಲ್ಲಿ ನಿಲ್ಲಲೀಯದು ಕುಳಿತಲ್ಲಿ ಕುಳ್ಳಿರಲೀಯದು*
*ಕ್ಷಣದಲ್ಲಿ ಪಾತಾಳಕ್ಕೈದುತಿದೆ ಕ್ಷಣದಲ್ಲಿ ಆಕಾಶಕ್ಕೈದುತಿದೆ*
*ಕ್ಷಣದಲ್ಲಿ ದಿಗ್ದೇಶಗೈದುತಿದೆ'*

ಅಲ್ಲದೆ–

*'ಓತಿ ಬೇಲಿವರಿದಂತೆ ಎನ್ನ ಮನವಯ್ಯಾ*
*ಹೊತ್ತಿಗೊಂದು ಪರಿಯಪ್ಪ*
*ಗೋಸುಂಬೆಯಂತಿನ್ನ ಮನವು'*

ಅದು–

*'ತನ್ನ ವಿಚಾರಿಸಲಲೊಲ್ಲದು*
*ಇದಿರವಿಚಾರಿಸಹೋಹುದು ಮನವು'*

ಇಂತಹ ಮನಸ್ಸನ್ನು ಎಂತು ನೆಚ್ಚುವೆನಯ್ಯಾ ಎಂದಿದ್ದಾರೆ ಬಸವಣ್ಣನವರು. ಇಂದ್ರಿಯಗಳನ್ನು ಸಂಯಮದಲ್ಲಿಟ್ಟು ಮನಸ್ಸನ್ನು ವಶಪಡಿಸಿ ಮಾತನ್ನು ಕಡಿಮೆ ಮಾಡಿ ಮೌನಿ ಯಾಗಬೇಕೆಂದು ಹೇಳಿದ್ದಾರೆ ಜ್ಞಾನಿಗಳು. ಇದರಲ್ಲಿ ಕಷ್ಟಪಟ್ಟು ಎಲ್ಲವನ್ನೂ ಮಾಡಬಹುದಾದರೂ ಮನಸ್ಸನ್ನು ವಶಪಡಿಸಿ ಕೊಳ್ಳುವುದು ಬಲುಕಷ್ಟ. ಈ ಕ್ಷಣ ಒಂದನ್ನು ಪೂಜಿಸಿ, ಅದೇ ಕ್ಷಣದಲ್ಲಿ ಇನ್ನೊಂದನ್ನು ಪೂಜಿಸಲು ತೊಡಗುತ್ತದೆ. ಹೀಗಾಗಿ ಈ ಚಂಚಲ ಮನಸ್ಸಿನ ಅರಿವು ಏಕರೂಪವಲ್ಲ. ಬಹುರೂಪ ಹೊಂದಿರುವಂತಹದ್ದು ಎಂದು ಸೂಚಿಸುತ್ತದೆ ಈ ಮಂತ್ರದ ಮಾತು.

ವೇದದಲ್ಲಿಯೂ ಹೀಗೆ ಹೇಳಿದ್ದುಂಟು– ಇಂದ್ರನಾಮಂ ಭಗವಂತನು ಹೇಳುತ್ತಾನೆ– ನನ್ನನ್ನು ಮರೆತು ನನ್ನ ಅಧೀನ ವಿರುವ ಬೇರೆ ದೇವತೆಗಳನ್ನು ಪೂಜೆ ಮಾಡುವುದು ಜೀವಿಗಳ ಚಂಚಲ ಸ್ವಭಾವವು.

*ನ ನೂನಮಸ್ತಿನೋಶ್ವಃ । ಕಸ್ತದ್ವೇದ ಯದದ್ಭುತಂ ।*
*ಅನ್ಯಸ್ಯ ಚಿತ್ತ ಮಭಿಸಂಚರೇಣ್ಯ ।*
*ಮುತಾಧೀತಂ ವಿನಶ್ಯತಿ* (ಋಗ್ವೇದ ೧-೧೭೦-೧)

ನನ್ನನ್ನು ಪೂಜಿಸಬೇಕೆಂಬ ಇಂದಿನ ಬುದ್ಧಿ ಸಂಕಲ್ಪವು ಇಂದೇ ಉಳಿಯುವುದಿಲ್ಲ ಎಂದಿರುವಾಗ ನಾಳೆ ಇರುವುದು ಹೇಗೆ? ಕೆಲವು ದಿವಸಗಳಲ್ಲಿ ಹರಿದು ಹೋಗುವ ಜೀವಿಗಳ ಈ ಅದ್ಭುತ ಮನಸ್ಸನ್ನು ಯಾರು ತಾನೆ ಹೀಗೆಯೇ ಇರುತ್ತದೆ ಎಂದು ತಿಳಿದಿರಲು ಶಕ್ತರು? ಅವರ ದೃಢ ಸಂಕಲ್ಪಗಳು ನಾಶವಾಗುತ್ತಿವೆ ಎಂದು ತಿಳಿಸಿದೆ. ಅಂದರೆ ಇಂದು ಪ್ರಾಪ್ತ ವಾಗಬೇಕಾದುದು ಇಂದು ಸಿಗುತ್ತಿಲ್ಲ. ಅದು ನಾಳೆಯೂ ಸಿಗುವಂಥಹದ್ದಲ್ಲ. ಯಾವುದು ಈಗಲೇ ಅಭೂತಸಂಕಲ್ಪ ದಲ್ಲಿಯೂ ಬರಲಿಲ್ಲ ಅದನ್ನು ಯಾರು ಬಲ್ಲರು. ಅನ್ಯರ ಚಿತ್ತವು ಚಲಾಯಮಾನವಾಗಿರುತ್ತದೆ ಮತ್ತು ಸಂಕಲ್ಪಿತ ವಿಚಾರವು ನಷ್ಟವಾಗುತ್ತದೆ. ಇಂದು ನನಗೆ ನನ್ನ ಪಾಲು ಸಿಗಲಿಲ್ಲ. ನಾಳೆಯೂ ಸಿಗುವುದಿಲ್ಲ ಎಂದು ಸಿಗುವು ದೆಂಬು ದನ್ನು ಯಾರು ಬಲ್ಲರು. ಏಕೆಂದರೆ ಇದು ಈಗಲೇ ಸಂಕಲ್ಪ ದಲ್ಲಿಯೂ ಬಂದಿಲ್ಲ. ಅನ್ಯರ ಚಿತ್ತವು ಸ್ಥಿರವಿರುವು... ಆದ್ದರಿಂದ ಅವನು ಸಂಕಲ್ಪ ಮಾಡಿದರೂ ಬದಲಿಸಬಲ್ಲ. ಯಾವ ಮನುಷ್ಯನ ಚಿತ್ತವು ಸ್ಥಿರವಿರುವುದಿಲ್ಲವೋ ಅವನು ಎಂದೂ ಸಂಕಲ್ಪ ಮಾಡಲಾರ. ಅವನ ವಿಚಾರಗಳು ಯಾವಾಗಲೂ ಬದಲಾಗುತ್ತಲೇ ಇರುತ್ತವೆ. ಆದ್ದರಿಂದ ಸಂಕಲ್ಪಿಸಲು ಮೊದಲು ಚಿತ್ತವನ್ನು ಸ್ಥಿರಗೊಳಿಸುವುದು ಅವಶ್ಯಕವಾಗಿದೆ.

ನಮ್ಮ ಮನಸ್ಸು ಹೀಗಾಗಿದೆ, ಸ್ಥಿರವಾಗಿರುವಂತೆ ಮಾಡು ವುದು ಅತ್ಯಾವಶ್ಯಕವಾದುದಾಗಿದೆ. ಅದಕ್ಕಾಗಿ

*ಸಂ ನೋಮದಾನಾಂ ಪತ ಇಂದೋ ದೇವಾಪ್ಸರಾ ಅಸಿ*
*ಸಖ್ಯೇವ ಸಖ್ಯೇ ಗಾತುವಿತ್ತಮೋ ಭವ*
(ಋಗ್ವೇದ 9-104-5)

ನಮ್ಮ ಆನಂದದೊಡೆಯಾ; ನೀನು ತೇಜಸ್ವಿರೂಪ ವಂತನು. ಮಿತ್ರನಾಗಿರುವವನು ಆತನ ಮಿತ್ರನಿಗೆ ಹೇಗೆ ಸನ್ಮಾರ್ಗ ದರ್ಶಕನೋ ಹಾಗೆಯೇ ಅನಿಮಿತ್ತ ಮಿತ್ರನಾಗಿರುವ ನೀನು ನಿನ್ನ ಸ್ನೇಹಿತನಾಗಿರುವ ನನಗೆ ಸನ್ಮಾರ್ಗದರ್ಶ ಕೋತ್ತಮನಾಗು ಎಂದು ಬೇಡಿಕೊಳ್ಳೋಣ.

ಮಾನವರಾಗಿರುವ ನಾವು ಅಲ್ಪಜ್ಞರೂ ಅಶಕ್ತರೂ ಪಾಪ ವಿದ್ದರೂ ಆಗಿರುವುದರಿಂದ ನಮಗೆ ಸುಜ್ಞಾನವನ್ನು ಇತ್ತು, ನಮ್ಮಿಂದ ಸತ್ಕರ್ಮಗಳನ್ನು ಮಾಡಿಸಿ, ಪಾಪದಿಂದ ಮುಕ್ತ ಗೊಳಿಸಿ ನಿನ್ನ ಕಲ್ಯಾಣತಮರೂಪವನ್ನು ತೋರಿಸಿ, ಅಮೃತತ್ವ ವನ್ನು ಅನುಗ್ರಹಿಸು ಎಂದು ಸಮರ್ಪಣಪೂರ್ವಕವಾಗಿ ಆತನನ್ನು ಬೇಡಿ ನಮ್ಮದು ಎಂದಿರುವ ನಮಸ್ಕಾರ ಆತನಿಗೆ ಅರ್ಪಿಸಿ ಮುಂದುವರಿಯೋಣ.

'ಕೃಪೆಯಿಂದ ಕಾರುಣ್ಯವ ಮಾಡಯ್ಯ ಪ್ರಭುವೇ' ಎಂದು ಬೇಡಿ ಭೂಯಿಷ್ಠಾಂ ತೇ ನಮಃ ಉಕ್ತಿ ವಿಧೇ ಮ'.

ಕೃತಜ್ಞತಾ ಪೂರ್ವಕವಾದ ಜ್ಞಾನಭಕ್ತಿಯುಕ್ತ ನುಡಿ 'ನಮೋ ನಮೋ' ಎಂಬ ಸಾವಿರ ನಮಸ್ಕಾರವನ್ನು ಅರ್ಪಿಸೋಣ. ಇದಲ್ಲದೆ ಬೇರೆ ಯಾವುದು ನಮ್ಮದೆಂಬುದು ನಮ್ಮ ಹತ್ತಿರವಿದೆ?

–ವಿವಿಧ ಮೂಲಗಳಿಂದ

### ಶ್ರೀವಾಣಿ

ನಮ್ಮ ಆಕಾಂಕ್ಷೆಗಳು ಉದಾತ್ತವಾಗಿರಲಿ. ಉದಾತ್ತ ಭಾವನೆಗಳನ್ನು ಪೋಷಣೆ ಮಾಡುವಂತನಾಗು, ಹೇಡಿ ಮನವನ್ನು ಬಿಟ್ಟುಬಿಡು ಎಂದಿದ್ದಾರೆ ದೊಡ್ಡವರು. ಆದ್ದರಿಂದ ಸಾಧ್ಯವಾದ ಮಟ್ಟಿಗೂ ಆಚರಣೆ ಮಾಡು ವಂತಹ ಪ್ರಯತ್ನ ಮಾಡಬೇಕು. ಮೊದಲಿನಿಂದಲೂ ಒಳ್ಳೆ ಕಾರ್ಯ ಮಾಡಲು ಸಂಕಲ್ಪ ಮಾಡಬೇಕು. ಸ್ಥಿರ ಮನಸ್ಸಿರಬೇಕು. ಏನೇ ಕಷ್ಟಗಳು ಬಂದರೂ ಅಂಜಬಾರದು, ಅಳುಕಬಾರದು, ಹಿಂಜರಿಯಬಾರದು. ನಾನು ವಿದ್ಯಾವಂತನಾಗಲೇಬೇಕು ಎಂಬ ದೃಢ ಸಂಕಲ್ಪ ಮಾಡಬೇಕು.





# ಸದಾ ನಗುನಗುತ್ತಾ ಹಸನ್ಮುಖಿಯಾಗಿರಿ !!

–ಮಿಮಿಕ್ರಿ ಈಶ್ವರಯ್ಯ, ಹಾಸ್ಯ ಕಲಾವಿದರು, ೩ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು.

ಇಂದಿನ ಒತ್ತಡದ ಜೀವನದಲ್ಲಿ ಎಲ್ಲರಿಗೂ ನಗು ಅತ್ಯಂತ ಆವಶ್ಯಕ. ಸಹಜವಾದ ನಗುವಿಗೆ ಅದ್ಭುತವಾದ ಶಕ್ತಿಯಿದೆ. ನಗು ಆರೋಗ್ಯದ ಹೆದ್ದಾರಿ. ನಗು ಪ್ರತಿಯೊಬ್ಬ ಮಾನವರಲ್ಲೂ ಸಹಜವಾಗಿ ಇರುವ ಆಸ್ತಿ. ನಾವು ನಗು ನಗುತ್ತಿದ್ದರೆ ನಮ್ಮ ಸಂತೋಷ ಇಮ್ಮಡಿಯಾಗುತ್ತದೆ. ನಮ್ಮಲ್ಲಿರುವ ನಗುವನ್ನು ನಾವು ಖರ್ಚು ಮಾಡಿದಷ್ಟೂ ಅದು ಮತ್ತೆ ಹೆಚ್ಚಾಗುತ್ತಲೇ ಇರುತ್ತದೆ. ನಾವು ನಗು ನಗುತ್ತಿದ್ದರೆ ಜಗತ್ತೂ ಸಹ ನಮ್ಮೊಡನೆ ನಗುತ್ತದೆ, ನಾವು ಅಳುತ್ತಿದ್ದರೆ ನಾವೊಬ್ಬರೇ ಅಳಬೇಕಾಗುತ್ತದೆ. 'Laugh, laugh every one laugh with you, cry alone cry' ಎಂದು ದಾರ್ಶನಿಕರು ಹೇಳಿದ್ದಾರೆ. ನಗುನಗುತ್ತಿರುವವರು ಸುಖವಾಗಿ ರುತ್ತಾರಂತೆ. ಸುಖವಾಗಿರುವವರು ನಗುವುದಿಲ್ಲವಂತೆ. ನಗುವನ್ನು ಯಾವುದೇ ಅಂಗಡಿಗಳಲ್ಲಿ ವ್ಯಾಪಾರ ಮಾಡುವುದಾಗಲಿ, ಕೊಳ್ಳುವುದಾಗಲಿ ಸಾಧ್ಯವಿಲ್ಲದ ಮಾತು. ಪ್ರತಿದಿನ ಸಹಜವಾಗಿ, ಸ್ವಾಭಾವಿಕವಾಗಿ ನಗುತ್ತಿದ್ದರೆ ಅದಕ್ಕಿಂತ ಆನಂದ ಬೇರೆ ಇಲ್ಲ. ನಗುನಗುತ್ತಿರುವವರು ಹೆಚ್ಚು ಕಾಲ ಆರೋಗ್ಯ ದಿಂದ ಜೀವಿಸುತ್ತಾರೆ. ನಗುನಗುತ್ತಾ ವ್ಯಾಪಾರ ಮಾಡುವ ವ್ಯಕ್ತಿಗಳು, ನಗುನಗುತ್ತಾ ರೋಗಿಗಳಿಗೆ ಚಿಕಿತ್ಸೆ ನೀಡುವ ವೈದ್ಯರು ಬಹುಬೇಗ ಜನಪ್ರಿಯತೆಯನ್ನು ಗಳಿಸುತ್ತಾರೆ. ನಗುಮುಖದಿಂದ ಇರುವವರನ್ನು ಎಲ್ಲರೂ ಇಷ್ಟಪಡುತ್ತಾರೆ. ಯಾವಾಗಲೂ ಹಸನ್ಮುಖಿಯಾಗಿದ್ದರೆ ಮಾನಸಿಕವಾಗಿಯೂ, ದೈಹಿಕವಾಗಿಯೂ ಆರೋಗ್ಯ ವಾಗಿರುತ್ತೇವೆ. ಯಾವುದೇ ಖಾಯಿಲೆಗಳು ಸುಲಭವಾಗಿ ಹತ್ತಿರ ಬರುವುದಿಲ್ಲ. ನಗು ಮನಸ್ಸಿನ ಎಲ್ಲ ದುಗುಡ, ದುಮ್ಮಾನ, ಆತಂಕ, ಒತ್ತಡಗಳನ್ನು ದೂರಮಾಡಿ ಉಲ್ಲಾಸವನ್ನು ನೀಡುತ್ತವೆ. ಸಕ್ಕರೆ ಖಾಯಿಲೆ ಬರಬಹುದು, ನಕ್ಕರೆ ಖಾಯಿಲೆ ಬರಲಾರದು ! ನಗುತ್ತಿರುವವರಲ್ಲಿ ರಕ್ತದ ಒತ್ತಡ ಕಡಿಮೆ. Happy ಆಗಿದ್ದರೆ BP ಬರುವ ಸಾಧ್ಯತೆಗಳಿಲ್ಲ.

'ಹಸನ್ಮುಖೀ ಸದಾ ಸುಖಿ' ಎಂದು ಹಿರಿಯರು ಹೇಳಿದ್ದಾರೆ. ಮಕ್ಕಳಿಂದ ಮುದುಕರವರೆಗೂ ಯಾರು, ಯಾವಾಗ, ಹೇಗೆ ಬೇಕಾದರೂ ನಗಬಹುದು. ನಗುವಿಗೆ ಲಿಂಗಭೇದವಾಗಲಿ, ಜಾತಿಭೇದವಾಗಲಿ, ವರ್ಗಭೇದವಾಗಲಿ, ವರ್ಣಭೇದವಾಗಲಿ, ವಯಸ್ಸಿನ ತಾರತಮ್ಯವಾಗಲಿ, ಮೇಲು–ಕೀಳಾಗಲೀ ಇಲ್ಲವೇ ಇಲ್ಲ. ಯಾವುದೇ ವ್ಯಕ್ತಿ ಹೆಣ್ಣಾಗಲಿ, ಗಂಡಾಗಲಿ ನಗುಮುಖದಿಂದಿದ್ದರೆ ಸುಂದರ ವಾಗಿ ಕಾಣಿಸುತ್ತಾರೆ. ನಗುವಿಗೆ ಭಾಷೆಯ ಪರಿಮಿತಿ ಇಲ್ಲ. ಇದು ಭಾಷೆಯನ್ನು ಮೀರಿದ್ದು. ಹೇಗೆ ನಗಬೇಕು? ಕನ್ನಡದಲ್ಲೇ ನಗಬೇಕೆ? ಇಂಗ್ಲೀಷ್‌ನಲ್ಲೇ ನಗಬೇಕೆ? ಅಥವಾ ಹಿಂದಿಯಲ್ಲೇ ನಗಬೇಕೆ? ಕುಳಿತು ನಗಬೇಕೆ? ನಿಂತು ನಗಬೇಕೆ ? ಮಲಗಿಕೊಂಡು ನಗಬೇಕೆ ? ಎಂದು ಕೇಳುವ ಅಗತ್ಯವೇ ಇಲ್ಲ. ಹೇಗೆ ಬೇಕಾದರೂ ನಗಬಹುದು. ಕೆಲವರು ಅ.ಹ_ಹಾ_ ಅಂತ ನಗ್ತಾರೆ, ಕೆವರು ಹಿ.ಹಿ.ಹೀ ಅಂತ ನಗ್ತಾರೆ, ಮತ್ತೆ ಕೆಲವರು ಹು.. ಹು. ಹೂ ಅಂತ ನಗ್ತಾರೆ, ಮತ್ತೂ ಕೆಲವರು ಹೆ. ಹೆ. ಹೆ. ಅಂತ ನಗ್ತಾರೆ. ಇನ್ನೂ ಕೆಲವರು ಹೊ. ಹೊ. ಹೋ. ಅಂತಲೂ ನಗ್ತಾರೆ. ಪ್ರಾಣಿಗಳಲ್ಲಿ ನಾಯಿಯೂ ಸಹ ಉತ್ಸಾಹದಿಂದ ಬಾಲಾ ಅಲ್ಲಾಡಿಸುತ್ತಿದ್ದರೆ ಅದು ನಗುನಗುತ್ತಿರುವಂತೆ ನಮಗೆ ಭಾಸವಾಗುತ್ತದೆ. ಆಗ ಅದು ಎಲ್ಲರೊಂದಿಗೂ ಸಂತೋಷ ದಿಂದ ವರ್ತಿಸುವುದನ್ನು ನಾವು ನೋಡಬಹುದಾಗಿದೆ.

ಪ್ರತಿದಿನ ಸಂತೋಷದಿಂದಿರಲು ನಮಗೆ ಅನೇಕ ಅವಕಾಶಗಳು ದೊರಕುತ್ತವೆ. ಅಂದರೆ ನಿತ್ಯ ಜೀವನದಲ್ಲಿ ನಾವು ಅನೇಕ ರೀತಿಯ ಮಾತುಗಳನ್ನು ಕೇಳಬಹುದು. ನಾವು ನೋಡುವ, ಆಡುವ, ಕೇಳುವ ಮಾತುಗಳ ಮಧ್ಯೆ ಹಾಸ್ಯ ಸೃಷ್ಟಿಯಾಗಿ ನಗು ಬರಬಹುದು. ಆದರೆ ನಮಗೆ ಅವುಗಳಲ್ಲಿರುವ ಹಾಸ್ಯವನ್ನು ಗ್ರಹಿಸುವ ಸಾಮರ್ಥ್ಯ ಬೇಕಷ್ಟೆ. ಇತ್ತೀಚಿನ ಚಲನಚಿತ್ರ, ದೂರದರ್ಶನಗಳಲ್ಲಿ ಅಶ್ಲೀಲ ಸಂಭಾಷಣೆ, ದ್ವಂದ್ವಾರ್ಥಗಳಿಂದ ಪ್ರೇಕ್ಷಕರನ್ನು ನಗಿಸಲು ಪ್ರಯತ್ನಿಸುವುದುಂಟು. ಆದರೆ ಇದು ಸರಿಯಾದ ಮಾರ್ಗ ವಲ್ಲ. ಪ್ರೇಕ್ಷಕರು ಸಹಜವಾಗಿ, ಸ್ವಾಭಾವಿಕವಾಗಿ, ನಗುವಂಥ ಸನ್ನಿವೇಶವನ್ನು ಸೃಷ್ಟಿಸಬೇಕು.

ಜಗತ್ತಿನಲ್ಲಿರುವ ಯಾವ ಪ್ರಾಣಿ, ಪಶು, ಪಕ್ಷಿ, ಕ್ರಿಮಿ ಕೀಟಾದಿಗಳಿಗೂ ಇಲ್ಲದೆ ಇರುವ ವರವನ್ನು ದೇವರು ಮನುಷ್ಯನಿಗೆ ಮಾತ್ರ ಕರುಣಿಸಿದ್ದಾನೆ. ಪವಿತ್ರವಾದ ಮನುಷ್ಯ ಜನ್ಮದಲ್ಲೂ ನಾವು ನಗದಿದ್ದರೆ ಮತ್ಯಾವ ಜನ್ಮದಲ್ಲೂ ನಾವುಗಳು ನಗಲು ಸಾಧ್ಯವಿಲ್ಲ! ಯಾವಾಗಲೂ ನಗುಮುಖ ದಿಂದ ಇರುವ ವ್ಯಕ್ತಿಗಳು ಯಶಸ್ವಿ ವ್ಯಕ್ತಿಯಾಗುತ್ತಾರೆ. ನಗುವಾಗ ಕೆಲವರು ಬಾಯಿ ಬಿಟ್ಟುಕೊಂಡು ನಗು ವವರಿದ್ದಾರೆ, ಕೆಲವರು ಬಾಯಿ ಮುಚ್ಚಿಕೊಂಡು ನಗುತ್ತಾರೆ, ಕೆಲವರು ಹಲ್ಲು ಬಿಟ್ಟುಕೊಂಡು ನಗುತ್ತಾರೆ. ಕೆಲವರು ಹಲ್ಲು ಮುಚ್ಚಿಕೊಂಡು ನಗ್ತಾರೆ. ಕೆಲವರು ನಗು ತಡೆಯಲಾಗದೆ ಬಿದ್ದು ಬಿದ್ದು ನಗ್ತಾರೆ. ಕೆಲವರು ನಕ್ಕು ನಕ್ಕು ಬೀಳ್ತಾರೆ. ಮತ್ತೆ ಕೆಲವರು ಉರುಳಾಡಿಕೊಂಡು ನಗ್ತಾರೆ. ಎಲ್ಲಕ್ಕಿಂತ

ಮುಖ್ಯವಾಗಿ ಮನಸ್ಸನ್ನು ಬಿಚ್ಚಿ ಮುಕ್ತವಾಗಿ ನಗುವುದೇ ಶ್ರೇಷ್ಠವೆನಿಸುತ್ತದೆ.

ಅಳುತ್ತಿರುವ ಅಪರಿಚಿತ ಮಕ್ಕಳನ್ನೂ ಸಹ ಪ್ರೀತಿಯಿಂದ ನಗುನಗುತ್ತಾ ಮಾತನಾಡಿಸಿದರೆ ಅವರೂ ಕೂಡಾ ನಕ್ಕು ನಮಗೆ ಹೊಂದಿಕೊಳ್ಳುತ್ತಾರೆ. ಮೂಕ ಪ್ರಾಣಿಗಳನ್ನೂ ಸಹ ನಾವುಗಳು ಪ್ರೀತಿಯಿಂದ ಮೈದಡವಿದರೆ ಅವುಗಳೂ ಪ್ರೀತಿಯಿಂದ ವರ್ತಿಸುತ್ತವೆ. ನಗುಮುಖದಿಂದ ಇದ್ದರೆ ಅಪರಿಚಿತರೂ ಪರಿಚಿತರಂತೆ ತೋರುತ್ತಾರೆ. ಗಂಟು ಮೋರೆ ಹಾಕಿಕೊಂಡಿದ್ದರೆ ಪರಿಚಿತರೂ ಅಪರಿಚಿತರಂತೆ ವರ್ತಿಸುವುದನ್ನು ನಾವು ನಮ್ಮ ದಿನನಿತ್ಯದ ಜೀವನದಲ್ಲಿ ಕಾಣಬಹುದು.

ಹಿಂದಿನ ಕಾಲದಲ್ಲಿ ಒಂದೇ ಕುಟುಂಬದಲ್ಲಿ, ಒಂದೇ ಮನೆಯಲ್ಲಿ ಅನೇಕ ಜನರು ವಾಸಿಸುತ್ತಿದ್ದರು. ಅಂದರೆ ತಾತ-ಅಜ್ಜಿ, ತಂದೆ-ತಾಯಿ, ದೊಡ್ಡಪ್ಪ-ದೊಡ್ಡಮ್ಮ, ಚಿಕ್ಕಪ್ಪ-ಚಿಕ್ಕಮ್ಮ, ಅಣ್ಣ-ಅತ್ತಿಗೆ, ಮೈದುನ-ನಾದಿನಿ, ಅಣ್ಣ-ತಮ್ಮ, ಅಕ್ಕ-ತಂಗಿ ಹೀಗೆ ಹಲವಾರು ಸದಸ್ಯರಿದ್ದು ಮಾತಾಡುವುದಕ್ಕೆ ನಗುವುದಕ್ಕೆ ಅನೇಕ ಸಂದರ್ಭಗಳಿರುತ್ತಿದ್ದವು. ಈಗಿನ ಕಾಲದಲ್ಲಿ ಎಲ್ಲಾ ಸದಸ್ಯರು ಒಟ್ಟಿಗೆ ಇರುವ ಸಾಧ್ಯತೆಗಳು ಬಹಳ ಕಡಿಮೆ. ಅಲ್ಲದೆ ಈಗ ಯಾರೇ ಭೇಟಿಯಾದರೂ ಅಂಕಲ್-ಆಂಟಿ ಪದಗಳನ್ನೇ ಹೆಚ್ಚು ಬಳಸುತ್ತಾರೆ. ಉಳಿದ ಪದಗಳನ್ನು ಬಳಸುವುದೇ ಅಪರೂಪವಾಗಿದೆ. ಅವರಲ್ಲಿ ಮಾತಾಡುವುದಕ್ಕಾಗಲಿ, ನಗುವುದಕ್ಕಾಗಲಿ ಸಮಯವೇ ಇಲ್ಲವೆನ್ನುತ್ತಾರೆ. ಅದರಲ್ಲೂ ಈಗಿನ ಕಾಲದಲ್ಲಿ ಗಂಡ ಹೆಂಡತಿ ಇಬ್ಬರೂ ನೌಕರಿಯಲ್ಲಿದ್ದರೆ ಗಂಡ ಒಂದು ಊರಿನಲ್ಲಿ, ಹೆಂಡತಿಯೊಂದು ಊರಿನಲ್ಲಿ, ಮಕ್ಕಳೊಂದು ಊರಿನಲ್ಲೋ, ವಿದ್ಯಾರ್ಥಿ ನಿಲಯಗಳಲ್ಲೋ ವಾಸಿಸುತ್ತಾರೆ. ಯಾರ ಸಂಪರ್ಕವೂ ಸಹಜವಾಗಿರುವುದಿಲ್ಲ. ಇದ್ದರೆ ಮೊಬೈಲ್ ಸಂಪರ್ಕವೊಂದೇ! ಪತ್ರಗಳನ್ನು ಬರೆಯುವ ವಿಚಾರವಂತೂ ದೂರವೇ ಉಳಿದಿವೆ. ಆಗೊಮ್ಮೆ ಈಗೊಮ್ಮೆ ರಜ ಸಿಕ್ಕಾಗ ಭೇಟಿಯಾಗಬಹುದು. ಅವರುಗಳಿಗೆ ಬಿಡುವು ಸಿಕ್ಕಾಗ ಟಿವಿ ಮುಂದೆ ಏಕಾಂಗಿಯಾಗಿ ಕುಳಿತು ನೋಡುವುದು ಅಷ್ಟೆ. ಅದರಲ್ಲೇ ಕೆಲವರು ತಲ್ಲೀನರಾಗಿರುತ್ತಾರೆ. ಟಿವಿಯನ್ನು ವೀಕ್ಷಿಸುವಾಗ ಮನೆಗೆ ಯಾರಾದರೂ ಬಂಧರೆ ಮನಸ್ಸಿಲ್ಲದ ಮನಸ್ಸಿನಿಂದ ಮಾತಾಡಿಸುತ್ತಾರೆ. ಈ ರೀತಿ ಮನಸ್ಸಿಲ್ಲದ ಮನಸ್ಸಿನಲ್ಲಿ ವರ್ತಿಸಿದರೆ ಬಂದ ಅತಿಥಿಗಳು ಮತ್ತೊಂದು ಬರುವ ಸಾಧ್ಯತೆಗಳು ಕಡಿಮೆ. ಹೀಗಾಗಿ ಅಲ್ಲಿಯೂ ನಗುವಿನ ವಾತಾವರಣ ಉಂಟಾಗುವುದಿಲ್ಲ. ಬಂದ ಅತಿಥಿಗಳನ್ನು ಸಂತೋಷದಿಂದ ಮಾತನಾಡಿಸಿದರೆ ಅವರೂ ಸಂತಸಪಡುತ್ತಾರೆ.

ನಮಗೆ ಎಷ್ಟೇ ಸಮಸ್ಯೆ, ಒತ್ತಡಗಳು ಬಂದರೂ ಆಕಾಶವೇನೂ ನಮ್ಮ ತಲೆಯ ಮೇಲೆ ಬೀಳುವುದಿಲ್ಲ. ಭೂಮಿ ತಲೆಕೆಳಕಾಗುವುದಿಲ್ಲ. ಅವುಗಳನ್ನು ನಗುನಗುತ್ತಾ ಸ್ವೀಕರಿಸಿದರೆ ಅವುಗಳೆಲ್ಲಾ ಸುಲಭವಾಗಿ ಪರಿಹಾರವಾಗಿ ಮನಸ್ಸಿಗೆ ನೆಮ್ಮದಿ, ಶಾಂತಿ, ನೆಮ್ಮದಿ, ಸಮಾಧಾನ ದೊರೆಯುತ್ತದೆ. ಇಲ್ಲದಿದ್ದರೆ ಮನಸ್ಸಿನಲ್ಲಿ ಗೊಂದಲ, ಆತಂಕ, ದುಗುಡ, ದುಮ್ಮಾನಗಳು ಜಾಸ್ತಿಯಾಗಿ ಆರೋಗ್ಯದ ಮೇಲೆ ದುಷ್ಪರಿಣಾಮವುಂಟಾಗುತ್ತದೆ.

ನಗುವವರನ್ನು ನಾವು ಈ ಕೆಳಕಂಡಂತೆ ಗುರುತಿಸ ಬಹುದು.

*ತನ್ನೊಳಗೆ ನಗುವವನು ಜ್ಞಾನಿ,*
*ತನಗೆ ತಾನೇ ನಗುವವನು ಹುಚ್ಚ,*
*ತನ್ನ ಗೆಳತಿಯನ್ನು ನೆನೆದು ನಗವವನು ಪ್ರೇಮಿ,*
*ತನ್ನನ್ನೇ ಮೈಮರೆತು ನಗುವವನು ರಸಿಕ,*
*ಇನ್ನೊಬ್ಬರನ್ನು ನೋಡಿ ನಗುವವನು ಗರ್ವಿ*
*ಇನ್ನೊಬ್ಬರಿಗೆ ನೋವಾಗುವಂತೆ ನಗುವವನು ಖಳನಾಯಕ*
*ನಕ್ಕು ಮನರಂಜನೆ ನೀಡುವವನು ವಿದೂಷಕ,*
*ನಗುನಗುತ್ತಲೇ ವಿಜಯ ಸಾಧಿಸುವವನು ಬುದ್ಧಿವಂತ*
*ಗೆದ್ದರೂ ನಗದವನು ಕರ್ಮಯೋಗಿ!*

ಇದರಲ್ಲಿ ತಾವು ಯಾವ ಸಾಲಿಗೆ ಸೇರುವಿರಿ ಎಂಬುದನ್ನು ಖಚಿತಪಡಿಸಿಕೊಳ್ಳಬಹುದು. ಯಾರು ಯಾವಾಗಲೂ ಹಸನ್ಮುಖಿಯಾಗಿ ನಗುನಗುತ್ತಾ ಇರುತ್ತಾರೋ ಅವರೇ ಸುಖಿಗಳು ಹಾಗೂ ಶ್ರೀಮಂತರು. ಕೆಲವರಿಗೆ ಭೌತಿಕವಾಗಿ, ಬೇಕಾದಷ್ಟು ಆಸ್ತಿ, ಅಂತಸ್ತು, ಮನೆ, ಮಠ, ಒಡವೆ, ವಸ್ತ್ರ, ಹಣ ಎಲ್ಲವೂ ಇರುತ್ತವೆ. ಆದರೆ ಅವರ ಮುಖದ ಮೇಲೆ ಸ್ವಲ್ಪವೂ ನಗುಮುಖದ ಕಳೆಯೇ ಇರುವುದಿಲ್ಲ. ಅಂತಹವರು ನಿಜವಾಗಿಯೂ ದುಃಖಿಗಳು ಹಾಗೂ ಮಾನಸಿಕವಾಗಿ ಬಡವರು. ಒಮ್ಮೆ ನಾನು ಎಲ್ಲರನ್ನೂ ನಕ್ಕು ನಲಿಸುತ್ತಿರು ಪುದನ್ನು ನೋಡಿದ ಅಂತಹ ವ್ಯಕ್ತಿಯೊಬ್ಬರು, ದಯಮಾಡಿ ನಮ್ಮ ಮನೆಗೆ ವಾರಕ್ಕೊಮ್ಮೆ ಯಾದರೂ ಬಂದು ನಗಿಸುವಂತೆ ಕೇಳಿಕೊಂಡರು. ಏಕೆಂದರೆ ಅವರು ಹೇಳಿದ ಪ್ರಕಾರ ಒಂದು ತಿಂಗಳಾದರೂ ಅವರ ಮನೆಯಲ್ಲಿ ಪರಸ್ಪರ ಯಾರೂ ನಗುತ್ತಿರಲಿಲ್ಲವಂತೆ !.

'ಗಾಳಿ ಬಂದಾಗ ತೂರಿಕೋ' ಎಂಬ ಗಾದೆ ಮಾತಿನಂತೆ, ನಗು ಬಂದಾಗ ನಕ್ಕುಬಿಡಬೇಕು. ನಗು ಬಂದಾಗಲೂ ನಗದೆ, ನಾಳೆ ನಗೋಣ, ನಾಳಿದ್ದು ನಗೋಣ, ರಜೆ ಸಿಕ್ಕಿದಾಗ ನಗೋಣ, ಮುಂದಿನವಾರ ನಗೋಣ, ಮುಂದಿನ ತಿಂಗಳು ನಗೋಣ, ಮುಂದಿನ ವರ್ಷ ನಗೋಣವೆಂದು ಮುಂದೂಡಿದರೆ ನಗುವಿನಿಂದ ದೊರಕುವ ಸುಖ, ಸಂತೋಷ, ಸಮಾಧಾನ, ತೃಪ್ತಿ, ಆನಂದದಿಂದ ವಂಚಿತರಾಗುತ್ತೀರಿ! ಜೋಕೆ! ಜೋಕೆ! ಕಾಲ ನಮಗಾಗಿ ಕಾಯುವುದಿಲ್ಲ, ಅಲ್ಲವೇ? ಹಾಗಾದರೆ ತಾವೆಲ್ಲರೂ ಈಗಿಂದೀಗಲೇ ತಮ್ಮ ಜೀವನಪೂರ್ತಿ ಯಾವಾಗಲೂ ನಗುನಗುತ್ತಾ, ಹಸನ್ಮುಖಿಯಾಗಿ ಆನಂದ ದಿಂದಿರಲು ಪ್ರಾರಂಭಿಸುವಿರಿ ತಾನೇ? ☆





## ಡಾ॥ ಪಂಚಾಕ್ಷರಿ ಹಿರೇಮಠರ 'ಕೆಳದಿ' – ಒಂದು ಅವಲೋಕನ

ಡಾ॥ ಪಂಚಾಕ್ಷರಿ ಅವರು ರಸಸಿದ್ಧ ಓಜಸ್ವಿ ಕವಿಗಳಾಗಿದ್ದಾರೆ. ಅಂತೆಯೇ ಅವರ ಕಾವ್ಯದಲ್ಲಿ ಶೃಂಗಾರ ಮತ್ತು ಆಧ್ಯಾತ್ಮ ಒಂದರೊಳಗೊಂದು ಹಾಸು-ಹೊಕ್ಕಾಗಿರುವುದು. ಅವರು ಪ್ರೇಮ, ಮಿಲನ, ವಿಯೋಗ, ಕುರಿತ ಕವಿತೆಗಳನ್ನೇ ಹೆಚ್ಚಾಗಿ ಬರೆದಿದ್ದಾರೆ. ಅವರೊಬ್ಬ ಮಹಾನ್ ಪ್ರೇಮಯೋಗಿ. ಪ್ರೇಮದ ಮಾತನ್ನೇ ಆಡುವ ಹೃದಯವಿದೆ ಅವರಿಗೆ. ಕಣ್ಣಿಂದ ಪ್ರೇಮದ ವ್ಯಥೆಯನ್ನು ತಿಳಿಯುವ ವ್ಯಕ್ತಿತ್ವ ಅವರಿಗಿದೆ. ಅವರು ಸೌಂದರ್ಯದ ರಹಸ್ಯಕ್ಕೆ ಮತ್ತು ರಮಣೀಯತೆಗೆ ತಮ್ಮ ಕಾವ್ಯದಲ್ಲಿ ಶ್ರೇಷ್ಠ ಸ್ಥಾನ ನೀಡಿದ್ದಾರೆ. ಅವರ ಕವಿತೆಗಳು ಭಾವೋದ್ವೇಗವನ್ನುಂಟು ಮಾಡದೇ, ಭಾವೋನ್ಮಾದದೊಂದಿಗೆ ಭಾವ ವಿಮೋಚನೆಗೆ ಅನುವು ಮಾಡಿಕೊಡುತ್ತವೆ. ಈ ಕಾರಣದಿಂದ ಪಂಚಾಕ್ಷರಿ ಅವರು ತಮ್ಮ ಸಮಕಾಲೀನ ಕವಿಗಳಿಗಿಂತ ಭಿನ್ನರಾಗಿ ತೋರುತ್ತಾರೆ. ಡಾ॥ ಹಿರೇಮಠರು ಪ್ರೇಮವನ್ನೇ ಪೂಜಿಸಿದರು. ಆರಾಧಿಸಿದರು. ಅವರ ಮುಕ್ತಕದ ಒಂದು ಸಾಲಿನಲ್ಲಿ–

'ಪ್ರೇಮ, ವಾತ್ಸಲ್ಯ ಮತ್ತು ವಿಶ್ವಬಂಧುತ್ವ ನನ್ನ ಬದುಕಿನ ಮತ್ತು ಬರವಣಿಗೆಯ ಮೂಲ ಆಧಾರವಾಗಿವೆ' ಎಂದರೆ ಮತ್ತೊಂದರಲ್ಲಿ 'ನನ್ನ ಭಗವತಿಯೇ, ನಾನು ಮಾಡುವ ಸಕಲ ಕ್ರಿಯೆಗಳೆಲ್ಲವೂ ನಿನ್ನದೇ ಆರಾಧನೆಯಾಗಿದೆ' ಎನ್ನುತ್ತಾರೆ. ಅಂತೆಯೇ ಡಾ॥ ಪಂಚಾಕ್ಷರಿ ಅವರು ನಿಷ್ಠಾಪೂರ್ವಕ ಪ್ರೇಮದ ಏಕನಿಷ್ಠತೆಯಲ್ಲಿ ತನ್ಮಯರಾಗಿರುತ್ತಾರೆ ಮತ್ತು ಪ್ರೇಮವೇ ತಾವಾಗಿರುತ್ತಾರೆ.

ಅವರ ಬಹಳಷ್ಟು ಪ್ರೇಮಕವಿತೆಗಳಲ್ಲಿ, ವಿಶೇಷವಾಗಿ ಮುಕ್ತಕಗಳಲ್ಲಿ ಅನುಭೂತಿಜನ್ಯ, ವಿರಹ ವೇದನೆ ಮತ್ತು ಅದರ ಮಾರ್ಮಿಕ ಅಭಿವ್ಯಕ್ತಿಯ ದೃಷ್ಟಿಯಿಂದ ನೋಡಿದಾಗ ಶೃಂಗಾರ, ಪ್ರೇಮ ಆಧ್ಯಾತ್ಮ ಕುರಿತು ಬರೆವ ಅವರ ಸಮಕಾಲೀನ ಕವಿಗಳಲ್ಲಿ ಡಾ॥ ಹಿರೇಮಠರನ್ನು ಸರಿಗಟ್ಟುವ ಕವಿಗಳಾರೂ ಇಲ್ಲವೆಂದೇ ಹೇಳಬಹುದೇನೋ. ಅವರ ಐದುನೂರಾ ಐದು ಮುಕ್ತಕಗಳ ಸಂಗ್ರಹ 'ಕೆಳದಿ' ಯಲ್ಲಿಯ ಮಿಲನ, ವಿಯೋಗ, ವಿರಹ, ವಿಪ್ರಲಂಬ ಕುರಿತು ಬರೆದ ಮುಕ್ತಕಗಳಲ್ಲಿ ಅವರ ಪ್ರಾಣವೇ ಮಾತನಾಡಿದ ಹಾಗೆ ನಮಗೆ ಭಾಸವಾಗುತ್ತದೆ. ಕಾರಣವೇನೆಂದರೆ, ಅಲ್ಲಿ ಅವರ ಆಳವಾದ ಅನುಭೂತಿ. ಭಾವ ತೀವ್ರತೆಯಿಂದ ಕೂಡಿದ ಕರುಣೆ. ಯಾತನಾಪೂರ್ಣ ವ್ಯಥೆ. ಆರ್ದ್ರಗೊಳಿಸುವ ದೈನ್ಯತೆ ಮತ್ತು ವೇದನೆಯ ಕಡಲು ಅಲ್ಲಿ ಉಕ್ಕುತ್ತಿರುವಂತೆ ತೋರುತ್ತದೆ. ತನ್ನ 'ಕೆಳದಿ'ಯಿತ್ತ ವಿರಹವನ್ನು ಸಹಿಸುತ್ತಲೇ ಆಕೆಯ ಬಗ್ಗೆ ತಮ್ಮಲ್ಲಿರುವ ಪ್ರೇಮದಲ್ಲಿ ಯಾವ ಕೊರತೆಯೂ ಉಂಟಾಗದಂತೆ ನೋಡಿಕೊಂಡಿರುವುದು ಕವಿಯ ದಿವ್ಯತೆಯ ಪ್ರತೀಕವೆಂದೇ ನಾನು ಭಾವಿಸಿದ್ದೇನೆ. ಅಂತೆಯೇ ಅವರ ಪವಿತ್ರ ಪ್ರೇಮದ ದಿವ್ಯತೆಯ ಸಲಿಲದಲ್ಲಿ ಮಜ್ಜನಗೈದು ಓದುಗ ದಿವ್ಯಾನುಭವ ಪಡೆಯುತ್ತಾನೆ.

*ವಿರಹದ ಈ ದೀರ್ಘ ರಾತ್ರಿ*
*ಮತ್ತೆ ಮತ್ತೆ ಮಗ್ಗಲು ಬದಲಿಸುತಿದೆ, ಕೆಳದಿ !*
*ಬಯಲೆಲ್ಲ ತುಂಬಿ 'ನೀನು'*
*'ನಾನು' ಆಗುವ ಆಸೆ ಬಲಿಯುತಿದೆ, ಕೆಳದಿ !*

ಅವರೊಮ್ಮೆ ತಾವೇ 'ಸಖಿ'ರಾಗುತ್ತಾರೆ. ಮಗದೊಮ್ಮೆ 'ಸಖಿ'ಯಾಗುತ್ತಾರೆ ಕೊನೆಯಲ್ಲಿ 'ಸಖ-ಸಖಿ ಏಕಾಕಾರವಾಗುತ್ತಾರೆ' ಅಂದರೆ ಒಂದು ನಿರಾಕಾರ ಸ್ಥಿತಿ. ಈ ಸಾಮರಸ್ಯದಿಂದಾಗಿ ಇವರ ಕೆಳದಿಯಲ್ಲಿ ಸಖಿ ಯಾರೋ ಸಖ ಯಾರೋ ಎಂಬುದು ತಿಳಿಯದಂತಾಗಿ ಓದುಗನ ಪಾಲಿಗೆ ವಿಸ್ಮಯವೇ ಗತಿಯಾದರೆ ಅಚ್ಚರಿಪಡಬೇಕಾಗಿಲ್ಲ. ಇಲ್ಲಿ ನಮಗೆ ಸಂಸ್ಕೃತದ ಕವಿ ಜಯದೇವನ 'ಗೀತಗೋವಿಂದ' ಅನುಭಾವಿ ಕವಿ. ಉಮರಖಯ್ಯಾಮನ ರುಬಾಯಿತಗಳು ಮತ್ತು ವಲ್ಲಭಾಚಾರ್ಯರು 'ರಾಧಾ ಶ್ಯಾಮರ ಕುರಿತು ಹಾಡಿದ ಗೀತಗಳು, ಬಂಗಾಲದ ರಾಮಿ ಚಂಡಿದಾಸರ ಗೀತಗಳು. ಕನ್ನಡದ ಅನುಭಾವಿ ಕವಿ ಮಧುರಚೆನ್ನರ 'ನನ್ನ ನಲ್ಲ' ಇವೆಲ್ಲವುಗಳ ನೆನಪು ಕಾಡುತ್ತದೆ.

'ಕೆಳದಿ'ಯ ವಿರಹದಲ್ಲಿ ಪ್ರೇಮಿ ಸುರಿಸುವ ಕಣ್ಣೀರಿನಿಂದಾಗಿ ಆಕೆ ಕೂಡಿದಾಗಲೂ ಆಕೆಯನ್ನು ಕಣ್ತುಂಬ ನೋಡಲಾಗುತ್ತಿಲ್ಲ. ಪ್ರೇಮಿಗೆ, ಆದರೂ ಆತ ತಾನು ಆರಾಧಿಸುವ ಕೆಳದಿಯನ್ನು ವರ್ಣಿಸುವ ರೀತಿ ಅಮೋಘವಾದುದು.

'ನಿನ್ನೊಡನಿರುವುದೇ ಶಿವಜ್ಞಾನ
ನಿನ್ನ ನಾದ ಬಿಂದು ಕಳೆ ತಿಳಿಯುವುದೇ ಪುಣ್ಯಪ್ರಧ!
ನೀನೋ ಎಳೆಯ ಮಾಣಿಕದಂತೆ
ಹೊಳೆ ಹೊಳೆಯುತ್ತಿಹೆ ಓ! ಎನ್ನ ಕೆಳದಿ !

'ಕೆಳದಿ'ಯ ವಿರಹದಲ್ಲಿ ಕವಿ ಪಕ್ವಗೊಳ್ಳುತ್ತ ಆಕೆಯ ಘನತೆಯನ್ನು ಕೊಂಡಾಡುತ್ತಲೇ ಹೋಗುತ್ತಾನೆ. ವಿರಹದ ವ್ಯಥೆಯ ಬೇರು ಆಳಅಳದಾಳಕ್ಕೂ ಇಳಿದಂತೆ. ಆತನ ಪ್ರೇಮ ಹೆಚ್ಚುತ್ತಲೇ ಹೋಗುತ್ತದೆ. ಜಾತಕಪಕ್ಷಿಯ ಪ್ರೇಮದ ನಿಷ್ಠೆಯಂತೆ ಕವಿ ಪಂಚಾಕ್ಷರಿಯವರ ಪ್ರೇಮದಲ್ಲಿ ನಿಷ್ಠೆ ಬಲಗೊಳ್ಳುತ್ತ ಹೋಗುತ್ತಿರುವುದನ್ನು ಕಾಣುತ್ತೇವೆ. ಡಾ॥ ಪಂಚಾಕ್ಷರಿಯವರ ಈ ಮುಕ್ತಕಗಳಲ್ಲಿ ಕಂಡು ಬರುವ ಸಮೃದ್ಧ ಭಾವನೆಗಳಂತೆ, ಕವಿಯ ಪ್ರಾವಿಣ್ಯತೆಯೂ ಕಂಡು ಬರುವುದು ಅವುಗಳ ಶ್ರೇಷ್ಠತೆಗೆ ಸಾಕ್ಷಿಯಾಗಿದೆ. ಭಾವನೆಗಳಿಗೆ ತಕ್ಕಂತೆ ಈ ಕವಿ ಭಾಷೆಯನ್ನು ಬಳಸಿರುವುದೊಂದು ವಿಶೇಷತೆಯೆಂದೇ ಹೇಳಬೇಕು. ಹೃದಯದ ಸೂಕ್ಷ್ಮಾತಿ ಸೂಕ್ಷ್ಮ ಭಾವನೆಗಳನ್ನು, ಅನುಭವಗಳನ್ನು ಅಭಿವ್ಯಕ್ತಿಗೊಳಿಸಲು ತುಂಬ ಮಧುರವಾದ, ಜೇನಿನಲ್ಲಿ ಮಿಂದ ಲಾಕ್ಷಣಿಕ ಭಾಷೆಯ ಪ್ರಯೋಗ ಮಾಡಿರುವುದು. ಕವಿಯ ಕಾವ್ಯಕ್ಕೆ ಸುವರ್ಣಕ್ಕೆ ಕುಂದಣವಿಟ್ಟಂತಾಗಿದೆ. ಹೀಗೆ ಭಾಷೆಯನ್ನು ಭಾವಾಭಿವ್ಯಕ್ತಿಯಲ್ಲಿ ಸಾಫಲ್ಯ ಪಡೆಯುವಂತೆ ದುಡಿಸಿಕೊಂಡಿರುವುದು ಡಾ॥ ಹಿರೇಮಠರಿಗೆ ಭಾಷೆಯ ಮೇಲಿರುವ ಪ್ರಭುತ್ವಕ್ಕೆ ಸಾಕ್ಷಿಯಾಗಿದೆ. ಇದರಿಂದ ಅವರೊಬ್ಬ ಭಾಷಾಪ್ರವೀಣರೆಂದೇ ಹೇಳಬೇಕು. ಇಲ್ಲಿಯ ಮುಕ್ತಕಗಳ ಭಾಷೆ ಅರ್ಥಸಂಪತ್ತಿನಿಂದ ತುಂಬಿತುಳುಕುತ್ತದೆ.

ಉದಾಹರಣೆಗಾಗಿ ಇಲ್ಲಿ ಕೆಲ ಮುಕ್ತಕಗಳನ್ನು ಉದ್ಧರಿಸಬೇಕೆನ್ನುತ್ತೇನೆ. ಈ ಮುಕ್ತಕಗಳಲ್ಲಿ ಎಂಥ ಅದ್ಭುತ ರೂಪಕಗಳು. ಪ್ರತಿಮೆಗಳು(ಇಮೆಜರಿ) ಹರಳುಗಟ್ಟಿವೆ ಎಂಬುದನ್ನು ನಾವು ಕಾಣಬಹುದಾಗಿದೆ.

*'ನೀನು ದೀಪಶಿಖಾ, ಚಿಜ್ಯೋತಿ*
*ಭಗವತಿ, ಭಾರ್ಗವಿ, ಕಾಳಿ, ಅಂಬೆ*
*ನಿರ್ವಿಕಲ್ಪ ಆನಂದದ*
*ಶ್ರೀ ಸ್ರೋತ ನೀನು ಓ! ನನ್ನ ಕೆಳದಿ !' (೪೮)*

*'ಉರಿವ ಅಗ್ನಿಯ ಮೇಲೆ*
*ಅನಾಹತ ಪದ್ಮದ ದಲದಲ !*
*ಅದರ ಮೇಲೆ ಪದ್ಮಾಸನದಿ*
*ಆಸೀನಳಾಗಿ ಅಭಯ ನೀಡುತಿಹೆ, ಕೆಳದಿ !' (೪೯)*

*'ಪಶ್ಚಿಮ ದ್ವಾರವ ದಾಟಿ*
*ಚಿದಾಕಾಶದಲಿ ನೆಲೆನಿಂತು*
*ಅಚ್ಚಕಮಲವ ಅರಳಿಸಿ*
*ನಿತ್ಯವೂ ಗಂಧ ಸೂಸುವಂತೆ ಮಾಡಿಹೆ, ಕೆಳದಿ!(೫೦೧)*

ಇಲ್ಲಿಯ ಅರ್ಥವ್ಯಾಪ್ತಿ ಹಿಡಿಯಲಾಗಲಿ, ವರ್ಣಿಸಲಾಗಲಿ, ನನ್ನಿಂದ ಆಗುತ್ತಿಲ್ಲ. ಅದೆಲ್ಲದರ ಸುಖವನ್ನೂ ಕೆಳದಿಯಲ್ಲಿಯ ಮುಕ್ತಕಗಳನ್ನು ಓದಿಯೇ ಅನುಭವಿಸಬೇಕು. ಆ ಸುಖ ಸ್ವಾನುಭವಕ್ಕೆ ಮಾತ್ರ ವೇದ್ಯ. ಸಮರ್ಪಣ ಭಾವ, ದೈನ್ಯತಾ ಭಾವ ಹೀಗೆ ಕೆನೆಗಟ್ಟಿದೆ ಈ ಕೆಳಗಿನ ಮುಕ್ತಕದಲ್ಲಿ –

*'ನನ್ನ ಕಾವ್ಯದಲಿ ಸೂಸುವ*
*ನವರಸಭರಿತ ಮಾಧುರ್ಯ*
*ನಿನ್ನ ಕೃಪೆಯೇ ಆಗಿದೆ, ಕೆಳದಿ!*
*ಅದಿಲ್ಲದಿರೆ ನನಗೆಲ್ಲಿ ಆ ಸಾಮರ್ಥ್ಯ, ಕೆಳದಿ!'*

ಬಹುಭಾಷಾ ಕೋವಿದರಾದ ಡಾ॥ ಪಂಚಾಕ್ಷರಿ ಅವರು ಕನ್ನಡ, ಹಿಂದಿ, ಉರ್ದು, ಸಂಸ್ಕೃತ, ಬಂಗಾಲಿ, ಪಂಜಾಬಿ, ಕಾಶ್ಮೀರಿ ಹೀಗೆ ಹತ್ತಾರು ಭಾಷೆಗಳ ಮಾಧುರ್ಯವನ್ನು ಅನುಭವಿಸುತ್ತ ಅದನ್ನೆಲ್ಲ ಆತ್ಮಸಾತ್ ಮಾಡಿಕೊಂಡು ಅನುಭವದ ಸವಿಯನ್ನು ತಮ್ಮ ಮಾತೃಭಾಷೆಯ ಓದುಗರಿಗೆ ಉಣಬಡಿಸುವ ಕೈಂಕರ್ಯ ಮಾಡಿದ ಕನ್ನಡ ಲೇಖಕರಲ್ಲಿ. ಬಹುಶಃ ಡಾ॥ ಹಿರೇಮಠರು ಅಗ್ರಗಣ್ಯರೆಂದೇ ಹೇಳಬೇಕಾಗುತ್ತದೆ.

ಜೀವನಾನುಭವ ಮತ್ತು ವೇದನೆಗಳೇ ಕವಿಯ ಕಾವ್ಯಕ್ಕೆ ಮೂಲದ್ರವ್ಯಗಳು ಮತ್ತು ಮೂಲಪ್ರೇರಣೆಗಳು ಪ್ರಿಯತಮೆಯಾದ 'ಕೆಳದಿ'ಯ ಬಗೆಗೆ ಇರುವ ಕವಿಯ ಆಸೀಮಪ್ರೇಮ ಎಲ್ಲಕ್ಕಿಂತ ಹೆಚ್ಚಿನ ಮಹತ್ವಪೂರ್ಣ ಸ್ರೋತವಾಗಿದೆ. ಈ ಮುಕ್ತಕಗಳ ಸೃಷ್ಟಿಗೆ ಆತ್ಮದ ತುಡಿತ ಮತ್ತು 'ಕೆಳದಿ'ಯ ಬಗೆಗಿರುವ ಅತುಲನೀಯ ಪ್ರೇಮ ಮತ್ತು ಪ್ರಾರ್ಥನೆಯೇ ಕಾವ್ಯದ ರೂಪದಲ್ಲಿ ಪ್ರಕಟವಾಗಿದೆ. ಬಹುಶಃ ಹೀಗೆ ಹೇಳಿದರೆ ಉಚಿತವೇನೋ. ಕವಿ 'ಕೆಳದಿ'ಯ ಸ್ಮರಣೆಯಲ್ಲಿ ಏನೆಲ್ಲ ಬರೆದನೋ ಅದೆಲ್ಲ ಕಾವ್ಯವಾಯಿತು.

ಅವರ ಮುಕ್ತಕಗಳಲ್ಲಿ ಅಪೂರ್ವವಾದ ಭಾವ ವಿಹ್ವಲತೆ ಮತ್ತು ಆತ್ಮಸಮರ್ಪಣದ ಭಾವ ತುಂಬಿ ತುಳುಕುತ್ತದೆ. ಇಲ್ಲಿಯ ಪ್ರೇಮಾಭಿವ್ಯಕ್ತಿಯಲ್ಲಿ ಒಂದು ಅನಿರ್ವಚನೀಯ ರಸ ಪ್ರಾಪ್ತಿಯಾಗುತ್ತದೆ. ಇಲ್ಲಿಯ ಕಾವ್ಯ ನಾದಮಯತೆಯಿಂದ, ಧ್ವನಿಪೂರ್ಣತೆಯಿಂದ ಓದುಗನನ್ನು ಬೆರಗುಗೊಳಿಸುತ್ತದೆ.

ನಿಜಕ್ಕೂ ಇದೊಂದು ಪ್ರೇಮಯೋಗಿಯೊಬ್ಬನ ಜೀವನದ ಮಹಾಕಾವ್ಯವಾಗಿದೆ.

–ಡಾ॥ ರೂಪಾ ಎಸ್.






## STATEMENT OF OWNERSHIP
## PARTICULARS ABOUT 'SIDDAGANGA'

FORM IV (See Rule 5)

| | | |
|---|---|---|
| Place of Publication | : | **Siddaganga (Regd.)**<br>Siddaganga Math.<br>Tumkur District - 572 104. |
| Periodicity of its Publication | : | **Monthly** |
| Printer's Name | : | **Sree Sree Shivakumara Swamigalu** |
| Whether Citizen of India | : | Indian |
| Address | : | **Sree Siddalingeshwara Swamy Offset Printing Press,**<br>Sree Siddaganga Math,<br>Tumkur District - 572 104. |
| Publisher's Name | : | **Sri H.B. Gangadharaiah** |
| Whether Citizen of India | : | Indian |
| Address | : | **Publisher**<br>Old Students Association,<br>Sree Siddaganga Math,<br>Tumkur District - 572 104. |
| Editor's name | : | **Sri H.V. Veerabhadraiah** |
| Nationality | : | Indian |
| Address | : | **Editor,** 'Siddaganga'<br>Sree Siddaganga Math,<br>Tumkur District - 572 104. |

I, H.B. Gangadharaiah hereby declare that the paarticulars given above are true to the best of my knowledge and belief.

Bangalore
Date : 1-3-2008

**(H.B. Gangadharaiah)**
Signature of Publisher

# ಮಾಚಿದೇವನ ವಚನಗಳ ಒಂದು ಅವಲೋಕನ

–ಡಾ|| ಎಂ. ನಾಗರಾಜ, ಪ್ರಾಂಶುಪಾಲರು, ಶ್ರೀ ಕೊಟ್ಟೂರುಸ್ವಾಮಿ ಪ.ಪೂ.ಕಾ. ಶ್ರೀ ಕೊಟ್ಟೂರು ಸಂಸ್ಥಾನ ಮಠ, ಹೊಸಪೇಟೆ.

ಹನ್ನೆರಡನೆಯ ಶತಮಾನದ ವಚನ ಸಾಹಿತ್ಯ ಕರ್ನಾಟಕ ಸಾಂಸ್ಕೃತಿಕ ಇತಿಹಾಸದಲ್ಲಿಯೇ ವೈಶಿಷ್ಟ್ಯ ಪೂರ್ಣವೂ ಗಮನೀಯವೂ ಆಗಿದೆ. ಸಮಕಾಲೀನ ಸಮಾಜ ಜೀವನದ ಚಿಂತನೆ. ಶರಣರು ತಮ್ಮ ವಚನಗಳ ಮೂಲಕ ಸ್ಪಂದಿಸಿ ರುವುದೇ ಇದಕ್ಕೆ ಕಾರಣ. ಅಂದಿನ ದೋಷಪೂರಿತ ವ್ಯವಸ್ಥೆ ಯನ್ನು ಧಿಕ್ಕರಿಸಿ ನವ ಸಮಾಜದ ನಿರ್ಮಾಣಕ್ಕೆ ಶರಣರು ಹಂಬಲಿಸಿದರು. ಜೊತೆಗೆ ವೀರಶೈವ ಧರ್ಮವನ್ನು ಜನಪ್ರಿಯಗೊಳಿಸಲು ತೊಡಗಿದರು. ಅಂತೆಯೇ ತಮ್ಮಲ್ಲಿ ಅನಿಸಿಕೆ ಅಭಿಪ್ರಾಯಗಳನ್ನು ಜನರಿಗೆ ತಿಳಿಯುವಂತೆ ಸುಲಭ ಭಾಷೆಯಲ್ಲಿ ಅಭಿವ್ಯಕ್ತಿಸಿದ್ದರು. 'ಹದಗೆಟ್ಟ ಧಾರ್ಮಿಕ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಿ ಅವುಗಳಲ್ಲಿ ಅಮೂಲಾಗ್ರವಾದ ಬದಲಾವಣೆಗಳನ್ನು ತಂದು ಅವುಗಳಿಗೊಂದು ವಿನೂತನ ರೂಪ ಕೊಡಬೇಕೆಂದು ಹಿರಿಯದಾದ ಆಸೆ ವೀರಶೈವ ಶರಣರದಾಗಿತ್ತು. ಇದರಿಂದ ಅವರು ವಚನಗಳ ರೂಪದಲ್ಲಿ ತನ್ನ ಅಭಿವ್ಯಕ್ತಿಯನ್ನು ವ್ಯಕ್ತಪಡಿಸಿದರು.

ವಚನ ಎಂದರೆ ಮಾತು, ನುಡಿ, ಮಾತು ಕೊಡು ಎಂದರ್ಥ. ನುಡಿದರೆ ಮುತ್ತಿನ ಹಾರದಂತಿರಬೇಕು ಎನ್ನುವ ಬಸವಣ್ಣನವರ ವಚನದಂತೆ ಕತ್ತಲೆಯಿಂದ ತುಂಬಿಹೋಗಿದ್ದ ಅಂದಿನ ಸಮಾಜಕ್ಕೆ ಶರಣರ ಪ್ರತಿಯೊಂದು ಮಾತು ನಿಜವಾಗಿಯೂ ಲಿಂಗವೇ ಮೆಚ್ಚ ಅಹುದಹುದೆನ್ನುವಂತೆ ಹೊರ ಬಂದಿರುವುದು ಗಮನಾರ್ಹವಾಗಿವೆ. ಇಂತಹ ಮಹತ್ವಪೂರ್ಣವಾದ ವಚನಕಾರರ ಈ ನುಡಿಗಳು ಶಕ್ತಿಯುತ ವಾಗಿದ್ದು ಅರ್ಥಪೂರ್ಣವಾಗಿದೆ. ಮಾನವನ ಜೀವನಕ್ಕೆ ಅವಶ್ಯಕವಾಗಿ ಬೇಕಾಗುವ ಶಾಶ್ವತ ಮೌಲ್ಯಗಳಾದ ಗೌರವ, ವಿಶ್ವಾಸ, ಸಮಾನತೆ ಸ್ವಾತಂತ್ರ್ಯ ಹಾಗೂ ಸಹ ಬಾಳ್ವೆಗಳನ್ನು ಪ್ರತಿಪಾದಿಸುವ ಶರಣ ಸಾಹಿತ್ಯ, ಮಾನವಕುಲಕ್ಕೆ ಎಂದೆಂದಿಗೂ ಪ್ರಸ್ತುತವಾಗಿದೆ.

ಶರಣರು ತಮ್ಮ ಭಾವನೆ ಅನುಭವಗಳನ್ನು ವಚನಗಳ ಮೂಲಕ ಜನರಲ್ಲಿ ತೋಡಿಕೊಂಡರಲ್ಲದೆ ಜನರ ಮೂಲ ಸಮಸ್ಯೆಗೆ ಸ್ಪಂದಿಸಿದರು. ಮತಭೇದವಿಲ್ಲದೆ, ಮೇಲು ಕೀಳಿಲ್ಲದೆ ಹೆಣ್ಣು ಗಂಡೆನ್ನದೆ ಎಲ್ಲರೂ ಸಮಾನ ಭೂಮಿಕೆಯ ಮೇಲೆ ನಿಂತು, ನವ ಸಮಾಜದ ರಚನೆಯಲ್ಲಿ ಎಲ್ಲರೂ ಒಗ್ಗೂಡಿ ಶ್ರಮಿಸಿದರು. ಈ ಶ್ರಮ ಯಶಸ್ವಿಗೊಂಡು ಮಾನವ ಧರ್ಮ ಕಾಪಾಡುವಲ್ಲಿ ಮಹತ್ವವಾದ ಪಾತ್ರ ವಹಿಸಿದರು. ಹೀಗೆ ಅನುಭವದ ಅನುಭಾವದ ಆಳದಿಂದ ಅನುಭಾವದ ಸತ್ವ ದಿಂದ ಮೂಡಿ ಬಂದ ಶರಣ ಸಾಹಿತ್ಯ ಕನ್ನಡ ಸಾಹಿತ್ಯದ ಹಿರಿಮೆಯ ಗರಿ ಎನಿಸಿಕೊಂಡಿತು. ವಿಶ್ವ ಮಾನವ ಜನಾಂಗಕ್ಕೆ ಈ ಸಾಹಿತ್ಯದಿಂದ ಲಭಿಸಿದ ಕಾಣಿಕೆ ಅಮೋಘವಾದದ್ದು ಮಹತ್ವಪೂರ್ಣವಾದದ್ದು. ಇಂತಹ ಮಹತ್ವಪೂರ್ಣವಾದ ವಚನ ವಾಙ್ಮಯದ ನಡುವೆ ಮಾಚಿದೇವನ ವಚನಗಳ ಚಿಂತನೆಗಳು ಇನ್ನೂ ವೈಶಿಷ್ಟ್ಯಪೂರ್ಣವಾಗಿವೆ. ಇದು ವರೆವಿಗೂ ವಿದ್ವಾಂಸರ ಸಂಶೋಧನೆಯ ಪರಿಣಾಮವಾಗಿ ಮಾಚಿದೇವನ ಚಿಂತನೆಗಳು ಇನ್ನೂ ವೈಶಿಷ್ಟ್ಯಪೂರ್ಣವಾಗಿದೆ. ಇದುವರೆಗೂ ವಿದ್ವಾಂಸರ ಸಂಶೋಧನೆಯ ಪರಿಣಾಮವಾಗಿ ಮಾಚಿದೇವನ ಸು: 447ಕ್ಕೆ ಮಿಕ್ಕ ವಚನಗಳು ಪ್ರಕಟಗೊಂಡಿವೆ. ಇವುಗಳಿಂದ ಕರ್ನಾಟಕ ಸಂಸ್ಕೃತಿಗೆ ಅಪಾರವಾದ ಕಾಣಿಕೆಯನ್ನು ಸಂದಿದೆ. ಇವುಗಳನ್ನು ಸಾಮಾಜಿಕ, ಸಾಹಿತ್ಯಕ ಹಾಗೂ ಮಾನವೀಯ ಮೌಲ್ಯಗಳ ಅಂಶಗಳನ್ನು ಇಲ್ಲಿ ಚರ್ಚಿಸಬಹುದಾಗಿದೆ.

**ಸಾಮಾಜಿಕ :** ಆಯಾ ಪರಿಸರಕ್ಕೆ ಆಯಾ ಸಂದರ್ಭಕ್ಕೆ ಆಯಾ ಯುಗ ಧರ್ಮಕ್ಕೆ ಪೂರಕವಾಗಿ ಸೃಷ್ಟಿಗೊಂಡ ಸಾಹಿತ್ಯ ದಲ್ಲಿ ಸಾಮಾಜಿಕ ಬದುಕು ಮೂಲ ವಸ್ತುವಾಗಿರುವುದರಿಂದ ಶರಣರು ಸಮಕಾಲೀನ ಸಮಾಜದ ಜೀವನವನ್ನು ವಿಮರ್ಶೆ ಮಾಡಿದರು. ಈ ನಿಟ್ಟಿನಲ್ಲಿ ಮಾಚಿದೇವರು ಕಂಡಿರುವ ಸಾಮಾಜಿಕ ಸ್ಥಿಗತಿಗಳೂ ಸೇರಿಕೊಂಡಿವೆ. ಮಾಚಿದೇವ ತನ್ನೊಂದು ವಚನದಲ್ಲಿ ಸಮಾಜದ ಕಳೆಯನ್ನು ಜನರ ನಿಂದನೆಯನ್ನು ಈ ರೀತಿ ಒಡಮೂಡಿಸಿದ್ದಾರೆ.

*'ಉಂಡರೆ ಭೂತವೆಂಬರು ಉಣದಿದ್ದರೆ*
*ಚಕೋರಿಯೆಂಬರು*
*ಊರೊಳಗಿರ್ದಡೆ ಸಂಸಾರಿಯೆಂಬರು ಅಡವಿ*
*ಯೊಳಗಿರ್ದಡೆ ಮರ್ಕಟವೆಂಬರು,*
*ಮಲಗಿರ್ದಡೆ ಜಡದೇಹಿಯೆಂಬರು ಮಲಗದಿರ್ದಡೆ*
*ಚೋರನೆಂಬರು. ಮಾತನಾಡಿರ್ದಡೆ*
*ಪಾಪಕರ್ಮಿಯೆಂಬರು ಮಾತನಾಡದಿರ್ದಡೆ*
*ಮುಸುಕರ್ಮಿಯೆಂಬರು, ಇಂತಿ ವಸುಧೆಯೊಳಗೆ*
*ಎಂಟು ವಿಧ ಕಳೆ ಕಳವಲು ವಶವಲ್ಲ ಕಾಣ*
*ಕಲಿದೇವಯ್ಯ.*

ಇಂದಿನಂತೆ ಅಂದಿನ ಸಮಾಜದಲ್ಲಿ ವ್ಯಕ್ತಿ ಸಮಾಧಾನವಾಗಿ ಬದುಕುವುದು ಕಷ್ಟದ ಕೆಲಸವಾಗಿತ್ತು. ಹೇಗೆ ಬದುಕಿದರೂ ಸಮಾಜ ವ್ಯಕ್ತಿಯನ್ನು ದೂಷಿಸುತ್ತಿತ್ತು. ಕಂಡಲ್ಲಿ ನಿಂತಲ್ಲಿ ಒಂದೊಂದು ಮಾತಿನಿಂದ ಚುಚ್ಚುತ್ತಿತ್ತು. ಇದನರಿತ ಮಾಚಿದೇವ ಸಮಾಜವನ್ನು ಸೂಕ್ಷ್ಮವಾಗಿ ಕಂಡುದಲ್ಲದೆ ಸಮಾಜದಲ್ಲಿನ ಎಂಟು ವಿಧವಾದ ಕಳೆಯನ್ನು ಮೀರಿ ಬಾಳಬೇಕು ಎಂದು ಕರೆ ನೀಡಿದ್ದಾನೆ. ಜೊತೆಗೆ ಜನರು ಮೆಚ್ಚುವುದಕ್ಕೋಸ್ಕರ ಬದುಕುವವರನ್ನು ತರಾಟೆಗೆ ತೆಗೆದುಕೊಂಡಿದ್ದಾನೆ. ಜನ ಹೊಗಳುತ್ತಾರೆಂಬುದಾಗಲೀ ತೆಗಳುತ್ತಾರೆಂಬುದಾಗಲೀ ನಾವು ಬದುಕಬೇಕಿಲ್ಲ. ನಮಗಾಗಿ ನಾವು ಬದುಕಬೇಕು, ಬದುಕಿಗಾಗಿ ಬದುಕಬೇಕು ಎಂದು ಹೇಳುವುದರ ಮೂಲಕ ಜನರಿಗೆ ಬದುಕುವ ಮಾರ್ಗವನ್ನು ಸೂಚಿಸಿದ್ದಾನೆ. ನಿಂದನಾತ್ಮಕ ಸಮಾಜವನ್ನು ಗೆಲ್ಲಲು ಈ ಎಂಟು ರೀತಿಯ ಕಳೆಗಳನ್ನು ವಶ ಮಾಡಿಕೊಳ್ಳಬೇಕು ಎನ್ನುವ ಮಾಚಿದೇವನ ವಿಚಾರಗಳು ಸರ್ವಕಾಲೀನ ಸತ್ಯವನ್ನು ಹೇಳುತ್ತದೆ.

'ಮಾತು ಮನೆ ಕೆಡಿಸಿತು ತೂತು ಒಲೆ ಕೆಡಿಸಿತು' ಎನ್ನುವ ಗಾದೆಯಂತೆ ಬರೀ ಮಾತನ್ನು ಸುರಿಸುತ್ತಿರುವ ಹೊಗಳು ಭಟ್ಟರ ವಿರುದ್ಧ ಮಾಚಿದೇವ ತುಂಬಾ ಕಠೋರವಾಗಿ ನುಡಿದಿರುವುದನ್ನು ಈ ವಚನದಿಂದ ಅರಿಯಬಹುದು.

*'ವಚನ ರಚನೆಯ ಮಾಡಿದ ಬಯಲು ರಂಜಕರಲ್ಲ*
*ಭಕ್ತರಪ್ಪರೆ ಅಯ್ಯಾ? ವಚನ ತನ್ನಂಬೆರದು*
*ತಾನು ವಚನದಂತಿರ ಅಂದೆಂತೆಂದಡೆ*
*ತನುಮನ ಧನವವೆಲ್ಲ ಹಿಂದಿಟ್ಟುಕೊಂಡು*
*ಒಡೆಯನ ಕಂಡು ನಾಯಿ ಬಾಲವ ಬಡಿದು ಕೊಂಬಂತೆ*
*ಆ ತೆರನಾಯಿ ತೆಂದ ಕಲಿದೇವರದೇವಯ್ಯಾ'.*

ಬರೀ ಮಾತು ಹೇಳುವುದರಿಂದಾಗಲೀ, ಪಾಂಡಿತ್ಯ ಪ್ರದರ್ಶನ ದಿಂದಾಗಲೀ ಸಮಾಜಕ್ಕೆ ಯಾವುದೇ ಪ್ರಯೋಜನವಾಗ ಲಾರದು. ತನುಮನಗಳು ಶುಚಿತ್ವಗೊಂಡಲ್ಲಿ ಮಾತ್ರ ಸಾಧ್ಯ ವಾಗುತ್ತದೆ. 'ಮಾತಿನ ಬಣವೆಯ ಮುಂದಿಟ್ಟುಕೊಂಡು ಒಡೆಯನ ಕಂಡು ನಾಯಿ ಬಾಲ ಬಡಿದಂತೆ' ಎಂದು ಟೀಕಿಸುವುದರ ಮೂಲಕ ಸಮಾಜದ ನಿಜ ಸ್ಥಿತಿಯನ್ನು ಬಯಲಿಗೆಳೆದಿದ್ದಾರೆ. ಈ ವಚನದಲ್ಲಿ ಮಾಚಿದೇವರು ಮಾತಿ ಗಿಂತ ಕೃತಿ ಲೇಸು ಎನ್ನುವುದನ್ನು ಹೇಳುವ ಮೂಲಕ ಸಮಾಜ ದಲ್ಲಿ ದುಡಿಯುವ ವರ್ಗವನ್ನು ಪ್ರತಿನಿಧಿಸಿರುವುದನ್ನು ಕಾಣಬಹುದು. ಇದರಿಂದ ಮಾಚಿದೇವನ ಸರ್ವಸಮಾನತೆಯ ತತ್ವವನ್ನು ಸಾರಿದಿದ್ದುನ್ನು ಕಾಣಬಹುದಾಗಿದೆ. ಹೀಗೆ ಸಮಾಜದ ಅಂಕುಡೊಂಕುಗಳನ್ನು ಲೋಕದ ಲೋಪ ದೋಷಗಳನ್ನು ಮಾಚಿದೇವ ನಿಷ್ಠುರವಾಗಿ ನೇರ ಧ್ವನಿಯಿಂದ ಟೀಕಿಸಿ ವಿಮರ್ಶಿಸಿ ಹಾಗೂ ತಿದ್ದಲು ಹೋರಾಡಿದ್ದಾನೆ. ಅಂದಿನ ಸಮಾಜದ ಜ್ವಲಂತ ಸಮಸ್ಯೆಗಳು ಇಂದಿಗೂ ಜಟಿಲವಾಗಿಯೇ ಇವೆ. ಇಂಥ ಜಟಿಲ ಸಮಸ್ಯೆ ಗಳಿಗೆ ಮಾಚಿದೇವನಂಥಹ ಶರಣ ವಿಚಾರಧಾರೆ ನಮ್ಮ ಸಮಾಜಕ್ಕೆ ಅತ್ಯವಶ್ಯಕವಾಗಿ ಬೇಕಾಗಿದೆ. ಇದರಿಂದ ಹದಗೆಟ್ಟ ಸಮಾಜ ಸುವ್ಯವಸ್ಥೆಯಿಂದ ಸಮಾನತೆ ಯಿಂದ ಸಹಬಾಳ್ವೆ ಯಿಂದ, ಮಾನವೀಯತೆಯಿಂದ ಕೂಡಿ ಬಾಳಬಹುದಾಗಿದೆ. ಇಂತಹ ವಿಚಾರಧಾರೆ ಸಮಾಜದ ಆತ್ಮೀಯತೆಯ ಭದ್ರ ಬುನಾದಿಯಾಗಬಲ್ಲದು.

**ಸಾಹಿತ್ಯಕ :** ತೀರ ಕೆಳವರ್ಗದಿಂದ ಬಂದ ಮಾಚಿದೇವನಿಗೆ ಸಾಹಿತ್ಯ ರಚಿಸಬೇಕು. ಕವಿಯೆಂದೆನಿಸಿ ಕೊಳ್ಳಬೇಕು ಎನ್ನುವ ಭಾವನೆಯೇ ಇರಲಿಲ್ಲ. ಸಮಕಾಲೀನ ಸಮಾಜದ ಜನ ರೆಲ್ಲರೂ ಒಬ್ಬರಿಗೊಬ್ಬರು ಹೊಂದಿಕೊಂಡು ಬಾಳಬೇಕು. ಸಹಬಾಳ್ವೆಯಿಂದ ಬದುಕಬೇಕು ಎನ್ನುವ ಭಾವನೆ ಮಾಚಿದೇವನಲ್ಲಿ ದಟ್ಟವಾಗಿ ನೆಲೆಗೊಂಡಿತು. ಜೀವನಕ್ಕೆ ಸಂಬಂಧಪಟ್ಟ ಉನ್ನತವಾದ ಮೌಲ್ಯಗಳನ್ನು ಪ್ರತಿಪಾದಿಸುವ ಆತನ ವಚನಗಳು ಸಹಜತೆಯಿಂದ ಕೂಡಿ ಸಾಹಿತ್ಯದ ಸವಿಯನ್ನು ತುಂಬಿ ತುಳುಕುವಂತಿವೆ.

'ಗಂಡನೆಂಜಲಿಗೆ ಹೇಸುವವಳು ಮಿಂಡನ ತಂಬಲು ತಿಂಬುವ ತೆರನಂತೆ' ಎನ್ನುವಲ್ಲಿ ಗುರುಗಳಿಂದ ಕೊಡಲ್ಪಟ್ಟ ಇಷ್ಟಲಿಂಗವನ್ನು ನಿರ್ಲ್ಯಕ್ಷಿಸಿ ಸ್ಥಾವರ ಲಿಂಗವನ್ನು ಪೂಜಿಸುವ ಡಾಂಭಿಕ ಭಕ್ತರನ್ನು ಕಟ್ಟಿಕೊಂಡು ಗಂಡನನ್ನು ಬಿಟ್ಟು ಮಿಂಡನನ್ನು ಬಯಸುವ ನಡತೆಗೆಟ್ಟ ಸ್ತ್ರೀಗೆ ಹೋಲಿಸಿದ ಉಪಮೆಯ ಅರ್ಥ ಮಹತ್ವದಾಗಿದೆ.

*'ಕಡಲೊಳಗಿನ ಮೊಸಳೆಯ ನಡುವ ಹಿಡಿದು*
*ಕಡೆಗೆ ಸಾರಿ ಹೂಹೇ ನೆಂಬುವರುಂಟೇ?*
*ಕರ್ಮದ ಕಡಲೊಳಗೆ ಮುಳಿಗಿ ಹೋದರೆಂದ*
*ಕಲಿದೇವಯ್ಯ*





ಇಲ್ಲಿ ಕಡಲನ್ನು ಜೀವನದ ಜೊತೆಗೆ ಮೊಸಳೆಯನ್ನು ಬಂಧು ಬಾಂಧವರು ಹಾಗೂ ಬದುಕಿನ ಏರುಪೇರುಗಳ ಜೊತೆಗೆ ಹೋಲಿಸಿರುವುದು ಮಾಚಿದೇವನ ನವೀನ ಕಲ್ಪನಾಶಕ್ತಿಗೆ ಹಿಡಿದ ಕನ್ನಡಿಯಂತಿದೆ. ಮಾಚಿದೇವನದು ಬಹುಮುಖ ವ್ಯಕ್ತಿತ್ವ ಹಿಡಿದ ದಾರಿ ಸರಳವಾದದ್ದು. ಸಮಾಜದ ಕೆಳಸ್ತರ ದಿಂದ ಬಂದ ಈತ ಎಲ್ಲರ ಮನಸ್ಸನ್ನು ಅರಿತು ಅವರವರ ಸ್ವಭಾವಗಳನ್ನು ದೃಷ್ಟಾಂತ, ಉಪಮೇಯ ಅಲಂಕಾರಗಳಿಂದ ಸುಂದರವಾದ ವಚನಗಳನ್ನು ರಚಿಸಿದ್ದಾನೆ.

*'ಎತ್ತೆತ್ತ ನೋಡಿದಡೆ ಅತ್ತತ್ತ ಬಸವನೆಂಬ ಬಳ್ಳಿ*
*ಎತ್ತಿ ನೋಡಿದಡೆ ಲಿಂಗವೆಂಬ ಗೊಂಚಲು*
*ಒತ್ತಿ ಹಿಂಡಿದಡೆ ಭಕ್ತಿಯೆಂಬ ರಸವಯ್ಯಾ'*

ಇದು ಮಾಚಿದೇವ ಕಂಡ ಬಸವ ಧರ್ಮದ ಶರಣ ತತ್ತ್ವದ ವಿಹಂಗಮ ನೋಟ. ಬಸವಣ್ಣ ದ್ರಾಕ್ಷಿಯ ಬಳ್ಳಿಯಾಗಿ, ಲಿಂಗವೇ ಗೊಂಚಲಾಗಿ, ಭಕ್ತಿಯೇ ರಸವಾಗಿ ಕಂಡ ಕಲ್ಪನೆ ಅಮೋಘವಾಗಿ ಮೂಡಿ ಬಂದಿದೆ. ಹೀಗೆ ಶರಣ ಧರ್ಮವನ್ನು ಸಾಹಿತ್ಯಕವಾಗಿ ಹೇಳಿದ ವಚನ ಇನ್ನೊಂದಿಲ್ಲ ವೆಂದರೂ ತಪ್ಪಾಗಲಾರದು.

**ಮಾನವೀಯತೆ :** 'ಇರಿಯಲಾಗದು ಪ್ರಾಣಿಯ, ಜರಿಯ ಲಾಗದು ಹೆರರ, ನರವತ್ತಿ ನುಡಿಯಲಾಗದು ಧಾರೆಯನು, ಹೆರರ ವಧುವ ಕಂಡು ಮನಮರುಗದಿರ್ದಡೆ ಶಿವಲೋಕ ಕರತಳಾ ಮಾಕವೆಂದ ಕಲಿದೇವರ ದೇವ

*ಎಲ್ಲೆಲ್ಲಿಯೂ ಪ್ರಾಣಿಯ ಕೊಲ್ಲದಿಹುದೇ ಧರ್ಮ*
*ಒಪ್ಪದಿಪ್ಪುದೇ ತಪ ಪರ ವಧುವಿನಾಸೆ ತನ್ನ ಮನದಲ್ಲಿ*
*ಇಲ್ಲದಿರ್ದಡೆ ದೇವ ತಾನಲ್ಲಿಯ ಎಂದ ಕಲಿದೇವಯ್ಯ*

ಇದು ಮಾಚಿದೇವ ಮನುಕುಲಕ್ಕೆ ಕರೆದು ನೀಡಿದ ಉಪದೇಶ ಹಾಗೂ ಸಂದೇಶ. ಸತ್ಯ ಶುದ್ಧ ಕಾಯಕ ವೊಂದಲದೆ, ಸತ್ಯ ಚಾರಿತ್ರ್ಯಕ್ಕೂ ಮಾಚಿದೇವ ಕರೆ ನೀಡಿ, ಇಡೀ ಮನುಕುಲಕ್ಕೆ ಅಳವಡಿಸಿಕೊಳ್ಳುವಂಥದ್ದು; ಅಲ್ಲದೇ ಸರ್ವಕಾಲಕ್ಕೂ ಬದುಕಿನ ಶುದ್ಧತೆಗೆ ಕರೆದುಕೊಟ್ಟ ಜೀವಂತಿಕೆಯ ವಿಚಾರ ಇದಾಗಿದೆ. ಪ್ರಾಣವಧೆಯಾಗಲೀ ಅದನ್ನು ಒಪ್ಪು ವುದಾಗಲಿ ಎರಡೂ ತಪ್ಪೆನ್ನುವುದನ್ನು ಮಾಚಿದೇವನ ಅಂದಿನ ಇಂದಿನ ಜನತೆಗೆ ನೀಡಿದ ಮಹತ್ವ ಪೂರ್ಣವಾದ ಸಂದೇಶ. ಅಲ್ಲದೇ ಪರರವಧುವನ್ನು ಆಸೆ ಪಡದೇ ಜೀವನ ನಡೆಸಿದ್ದೇ ಯಾದರೆ ದೇವಲೋಕ ತನ್ನಲ್ಲಿ ಅಥವಾ ದೇವನೇ ತಾನಾ ಗುತ್ತಾನೆನ್ನುವ ಅತ್ಯಂತ ಸರಳವಾದ ನೀತಿಯನ್ನು ಮಾನ ವೀಯತೆಯ ಮೌಲ್ಯವನ್ನು ಸಾರಿದ್ದಾನೆ.

ಹೀಗೆ 'ವ್ಯಕ್ತಿ ತನ್ನ ವೈಯಕ್ತಿಕವಾದ ಜೀವನವನ್ನು ದೊಡ್ಡದು ಮಾಡಿಕೊಳ್ಳದ ಹೊರತು ಸಮಾಜವನ್ನು ದೊಡ್ಡದು ಮಾಡಲಾರ' ಎಂಬ ಮಾತಿನರ್ಥದಂತೆ ಮಾಚಿದೇವ ಶರಣರಲ್ಲಿ ಪ್ರಮುಖನಾಗಿ ಅನೇಕ ಮುಖಿ ವ್ಯಕ್ತಿತ್ವ ಕಾಯಕರತಿ, ವೀರಶ್ರೀ, ಭಾವಪ್ರತಿಭೆ, ಸತ್ಯನಿಷ್ಠೆ, ನ್ಯಾಯ ನಿಷ್ಠುರತೆ ನಿರಹಂಕಾರ ನಿರ್ವಂಚಕತ್ವ ಇತ್ಯಾದಿ ತತ್ವ ಸಂಕಲನ ಪಡೆದ ಸಾಕಾರ ಮೂರ್ತಿ ಮಾಚಿದೇವ ನೆಂದು ಹೇಳಬಹುದು. ಇಂಥಾ ಮಹಾಶರಣರ ತತ್ವ ಸಂದೇಶಗಳು ಮಾನವ ಕುಲದ ದಾರಿದೀಪ ಎಂದೂ ಹೇಳಬಹುದು. ಈತನನ್ನು ಘನವೆತ್ತ ವ್ಯಕ್ತಿತ್ವವನ್ನು ಹೊಂದಿದ ಮಹಾಕವಿ ಚಾಮರಸ ತನ್ನ ಪ್ರಭುಲಿಂಗ ಲೀಲೆಯಲ್ಲಿ ಹೀಗೆ ಕೊಂಡಾಡಿದ್ದಾನೆ.

*'ಶರಣುವೊಕ್ಕೆ ಸಮಸ್ತರಂತ ಕರಣದಲ್ಲಿ*
*ಯಾನಾದಿಮಯಾ ಬರದ ಮೈಲಿಗೆ ದೊಳೆದು ಭಕ್ತಿರಸ*
*ಪ್ರವಾಹದಲಿ ಶರಣ ಪದವಿಗೆ ಸಲಿಸಿ ಪರಮೇಶ್ವರನ*
*ತೋರುವ ಸುಲಭಕರುಣಾ ಶರಧಿ ಮಡಿವಾಳ*
*ಮಾಚಿದೇವಯ್ಯಂಗೆ ಶರಣಾರ್ಥಿ'*

ಶರಣು ಎಂದು ಬಂದವರೆಲ್ಲರ ಮನದಲ್ಲಿನ ಅನಾದಿ ಮಾಯೆಯೆಂಬ ಬಟ್ಟೆಯ ಮೈಲಿಗೆಯನ್ನು ಭಕ್ತಿರಸ ಪ್ರವಾಹ ದಲ್ಲಿ ತೊಳೆದು ಅವರನ್ನು ಶುದ್ಧಗೊಳಿಸಿ ಶರಣ ಪದವಿಗೆ ಸಲ್ಲಿಸಿ ಶಿವನನ್ನು ಕಾಣಿಸುವ, ಭಕ್ತರಿಗೆ ಸುಲಭ ಕರುಣಾ ಸಮುದ್ರನೂ ಆದ ಮಡಿವಾಳ ಮಾಚಿದೇವಯ್ಯನಿಗೆ ಶರಣಾರ್ಥಿ' ಎಂದು ಸ್ಮರಿಸಿ ತನ್ನ ಔದಾರ್ಯವನ್ನು ತೋರಿದ್ದಾನೆ. ಈತನು ತೋರಿದ ದಾರಿಯಲ್ಲಿ ನಡೆದು, ಭವಿತರನ ಕಳೆದುಕೊಂಡು ವ್ಯಕ್ತಿತ್ವವನ್ನು ಹೊಂದಿ, ಮನುಕುಲದ ಸಾಧನೆ ಸಿದ್ಧಿಗಳೇ ಆತ್ಮೋದ್ಧಾರ ಹೊಂದುವುದು ಮನುಕುಲದ ಅಂತಿಮ ಗುರಿ ಎಂಬ ತತ್ತ್ವವನ್ನು ಸಾರಿ, ಕರ್ನಾಟಕ ಸಾಂಸ್ಕೃತಿಕ ಚರಿತ್ರೆಯಲ್ಲಿ ಮಡಿವಾಳ ಮಾಚಿದೇವರು ಅಜರಾಮರರಾಗಿದ್ದಾರೆ. ☆

### ವಚನಗಳು

ತನುವಿನಲ್ಲಿ ಹೊರೆಯಿಲ್ಲ. ಮನದಲ್ಲಿ ವ್ಯಾಕುಳವಿಲ್ಲ. ಭಾವದಲ್ಲಿ ಬಯಕೆಯಿಲ್ಲ. ಅರಿವಿನಲ್ಲಿ ವಿಚಾರವಿಲ್ಲ. ನಿಜದಲ್ಲಿ ಅವಧಾನವಿಲ್ಲ. ನಿರ್ಲೇಪ ಸಂಗದಲ್ಲಿ ಬಿಚ್ಚಿ ಬೇರಾಗಲಿಲ್ಲ. ಕಲಿದೇವರ ದೇವ ನಿಮ್ಮಲ್ಲಿ ಬೆರಿಸಿ ಬೇರಾಗದಿರ್ದನು

–ಮಡಿವಾಳ ಮಾಚಿದೇವ







## ಸಮನ್ವಯ ಸಂಕೇತ – 'ಯುಗಾದಿ'

–ಪ್ರೊ. ಕೆ. ಓಂಕಾರಪ್ಪ, ಕನ್ನಡ ಪ್ರಾಧ್ಯಾಪಕರು, ಎಸ್.ಟಿ.ಜೆ. ಮಹಿಳಾ ಕಾಲೇಜು ಚಿಕ್ಕಮಗಳೂರು–೫೭೭ ೧೦೧.

*ಅರವತ್ತು ಸಂವತ್ಸರದ ಈ ಚಕ್ರ*
*ತಿರುಗುತ್ತಲೆ ಇರುವಾಗ*
*ಇದರಲ್ಲಿ ಯಾವುದು ಮೊದಲು*
*ಯಾವುದು ತುದಿ ? ಹೆಸರಿಗೆ ಮಾತ್ರ*
*ಯುಗಾದಿ ಯುಗಾದಿ ಅನ್ನುತ್ತೇವಲ್ಲ*
*ಇವತ್ತು ಯಾವ ಯುಗದ ಆದಿ*
*ಅಥವಾ ಯಾವ ಯುಗದ ಅಂತ್ಯ ?*

ಯುಗದ ಆದಿಯೆಂದು ನಂಬಿಕೊಂಡು ಬಂದಿರುವ 'ಯುಗಾದಿ'ಯನ್ನ ಕವಿ ಜಿ.ಎಸ್.ಎಸ್. ತಮ್ಮ 'ಯುಗಾದಿಯ ಪ್ರಶ್ನೆಗಳು' ಕವಿತೆಯಲ್ಲಿ ನಿಕಷಕ್ಕೆ ಒಡ್ಡಿದ್ದಾರೆ. ಕಾಲಚಕ್ರದ ನಿರಂತರ 'ಪರಿಭ್ರಮಣ'ದಲ್ಲಿ ಯುಗದ ಆದಿ ಅಂತ್ಯಗಳ ಚರ್ಚೆ ಮಾನವ ಮತಿಯನ್ನು ಬಹಳ ಕಾಲದಿಂದಲೂ ಕಾಡುತ್ತಲೇ ಬಂದಿದೆ. ಅಂತ್ಯವಿಲ್ಲದ ಆದಿ ಅಪ್ರಯೋಜಕ; ಆದಿಗೆ ಎಡೆ ಮಾಡಿಕೊಡದ ಅಂತ್ಯ ನಿರರ್ಥಕ. ಬದುಕಿನ ಸಾರ್ಥಕತೆ ಇರುವುದು ಕೇವಲ ಆದಿ – ಅಂತ್ಯಗಳಿಂದಲ್ಲ. ಬದುಕಿನ ಚಲನಶೀಲಗತಿಯಲ್ಲಿ ಅರ್ಥಪೂರ್ಣ ಬದುಕಿನ ಹುಡುಕಾಟದಲ್ಲಿ.

ಸಂತೋಷದ ಕ್ಷಣಗಳು ಬದುಕಿನ ಏಕತಾನತೆಯನ್ನು ದೂರ ಮಾಡಿ ನವೋಲ್ಲಾಸಕ್ಕೆ ಕಾರಣವಾಗಬಲ್ಲದು. ಇಂಥ ಸಂತೋಷಗಳ ಕ್ರಿಯಾತ್ಮಕ ಆಚರಣೆಗಳೋ ಹಬ್ಬಗಳು. ವ್ಯಷ್ಟಿ ನೆಲೆಯಿಂದ ಸಮಷ್ಟಿಯ ಹರವು ಹಬ್ಬಗಳಿಗುಂಟು. ಹಬ್ಬಗಳ ಆಚರಣೆ ಇಂದು ನೆನ್ನೆಯ ಸಂಗತಿಯಲ್ಲ. ಹಲವು ಹಬ್ಬಗಳಿಗೆ ಪೌರಾಣಿಕ ಹಿನ್ನಲೆಯುಂಟು, ಚಾರಿತ್ರಿಕ ಮಹತ್ವ ವುಂಟು, ಸಮಕಾಲೀನ ವಿಶೇಷವೂ ಉಂಟು. ವಿಭಿನ್ನ ಸಂಸ್ಕೃತಿಗೆ ನೆಲೆವೀಡಾದ ಈ ನಾಡಿನಲ್ಲಿ ಹಬ್ಬಗಳ ಆಚರಣೆ ಯಲ್ಲಿಯೂ ವೈವಿಧ್ಯತೆಯುಂಟು. ಮತ, ಧರ್ಮ, ಸಂಪ್ರದಾಯಗಳ ಹಿನ್ನಲೆಯಲ್ಲಿ ಹಬ್ಬಗಳನ್ನು ಆಚರಿಸು ವುದಿರಲಿ, ಮಹತ್ವದ ದಿನಗಳು, ಮಹಾತ್ಮರ ಜಯಂತಿಗಳೂ ಕೂಡ ಇಂದು ಹಬ್ಬಗಳ ಸಾಲಿಗೆ ಸೇರಿಕೊಂಡಿವೆ.

ಋತು ಚಕ್ರದಲ್ಲಿ ವಸಂತಮಾಸಕ್ಕೆ ತನ್ನದೇ ಆದ ಅತಿಶಯತೆ ಇದೆ. ಹಾಗೆಂದು ಉಳಿದ ಋತುಗಳಿಗೆ ಈ ಬಗೆಯ ವೈಶಿಷ್ಟ್ಯವಿಲ್ಲವೆಂದು ಭಾವಿಸಬೇಕಾಗಿಲ್ಲ. ಸೃಷ್ಟಿ ಸ್ಥಿತಿಯ ಒಗಟನ್ನು ಸಂಪೂರ್ಣವಾಗಿ ಭೇದಿಸಲು ಇಂದಿನ ವರೆಗೆ ಯಾರಿಗೂ ಸಾಧ್ಯವಾಗಿಲ್ಲ. ಪೂರ್ಣತೆಯನ್ನುವುದು ನಿಜಕ್ಕೂ ಸಾಧಿಸಲಾರದ ಆದರ್ಶ. ಪೂರ್ಣತೆಯ ಕಡೆ ಪ್ರಯಾಣಿಸುವುದಷ್ಟೇ ಎಲ್ಲರ ಕೆಲಸ.

ಮುದುಡುವ, ಉದುರುವ ಕ್ರಿಯೆ ನಿಸರ್ಗದಲ್ಲಿ ನಡೆಯುತ್ತಿರುವಂತೆಯೇ ಕೊನರುವ ಪ್ರಕ್ರಿಯೆಯೂ ನಿರ್ದಿಷ್ಟ ಕಾಲಮಾನದಲ್ಲಿ ಪ್ರಕೃತಿಯಲ್ಲಿ ನಡೆಯುತ್ತಲೇ ಇರುತ್ತದೆ. ಮೊದಲನೆಯದು ಕೆಡಹುವ ಕ್ರಿಯೆಯಾದರೆ, ಎರಡನೆಯದು ಕಟ್ಟುವ ಕಲೆ. ಈ ಕಾರಣದಿಂದಾಗಿ ಋತು ಚಕ್ರದಲ್ಲಿ ಪ್ರತಿವರ್ಷ ಚೇತೋಹಾರಿಯಾಗಿ ಆಗಮಿಸುವ ವಸಂತ ವೈಭವ ಯುಗದ ಆದಿಗೆ ಸಂಕೇತವಾಗಿರುವುದು ಉಚಿತವಾಗಿಯೇ ಇದೆ. ಹೀಗಾಗಿ ಯುಗಾದಿ ಉಳಿದ ಹಬ್ಬಗಳಿಗಿಂತ ಭಿನ್ನವಾಗಿದೆ ವಿಶಿಷ್ಟವಾಗಿದೆ.

ಚೈತ್ರಮಾಸದ ಮೊದಲ ದಿನ ಸೃಷ್ಟಿಕರ್ತ ಬ್ರಹ್ಮ ಜಗತ್ ಸೃಷ್ಟಿಯನ್ನು ಆರಂಭಿಸಿದನೆಂದೂ, ಈ ಕಾರಣದಿಂದಾಗಿ ಪ್ರತಿವರ್ಷವೂ ಈ ದಿನದಿಂದ ನೂತನ ವರ್ಷವನ್ನು ಗಣನೆಗೆ ತೆಗೆದುಕೊಂಡರೆಂದು ಐತಿಹ್ಯವೊಂದು ತಿಳಿಸುತ್ತದೆ. ಜಗತ್ ಸೃಷ್ಟಿಗೆ ಕಾರಣನಾದ ಬ್ರಹ್ಮನಿಗೂ ಚೈತ್ರದ ಚೆಲುವು ಮುದ ನೀಡಿರಬೇಕು. ಶಾಲಿವಾಹನ ಶಕೆ ಆರಂಭವಾಗುವುದು ಕ್ರಿಸ್ತಶಕೆಯ ನಂತರ. ಕ್ರಿಸ್ತಶಕೆ ಆರಂಭವಾಗಿ 28 ವರ್ಷಗಳ ನಂತರ. ದಕ್ಷಿಣ ಇಂಡಿಯಾದಲ್ಲಿ ಈ ಶಕೆಯ ಬಳಕೆಯೇ ಹೆಚ್ಚು. ಪಂಚಾಂಗಗಳು ಈ ಶಕೆಯ ಆಧಾರದ ಮೇಲೆ ಫಲಾಫಲಗಳನ್ನು ಹೇಳುತ್ತವೆ. ಐತಿಹ್ಯದ ಘಟನೆಗಳ ಸತ್ಯಾ ಸತ್ಯತೆ ಏನೇ ಇರಲಿ ಯುಗಾದಿ ಹರುಷದ ಹಬ್ಬವಾಗಿ ವರುಷದ ಹಬ್ಬವಾಗಿ ಅನೂಚಾನವಾಗಿ ನಡೆದುಕೊಂಡು ಬರುತ್ತಿರುವುದೊಂದು ವಿಶೇಷ.

'ಯುಗ ಯುಗಾದಿ ಕಳೆದರೂ ಯುಗಾದಿ ಮರಳಿ ಬರುತಿದೆ' ಎನ್ನುತ್ತದೆ ಕವಿಚೇತನ. ಪ್ರತಿವರ್ಷದ ಯುಗಾದಿಯೂ ನಿತ್ಯನೂತನ. ಕಳೆದ ವರ್ಷದ ಯುಗಾದಿ ಯಂತೆ ಈ ವರ್ಷದ ಯುಗಾದಿ ಇಲ್ಲ. ಮುಂದಿನ ವರ್ಷ ಮತ್ತೊಂದು ಬಗೆ. ಮಗುದೊಂದು ವರ್ಷ ಇನ್ನೊಂದು

ರೀತಿ. ಸೃಷ್ಟಿಯ ಚಲನಶೀಲಕ್ರಿಯೆ ಪ್ರತಿವರ್ಷ ಬರುವ ಯುಗಾದಿ ವೈವಿಧ್ಯತೆಗೆ ಕಾರಣವಾಗಿ ಜನಮನದಲ್ಲಿ 'ಹೊಸ ಹರುಷ ಮೂಡಲು' ಬದುಕಿನ ಏಕತಾನತೆಯನ್ನು ನೀಗಲು ಕಾರಣವಾಗಿದೆ.

ಬದುಕು ಹೂವಿನ ಹಾಸಿಗೆಯಲ್ಲ. ಮುಳ್ಳಿನ ಹಾದಿಯೂ ಅಲ್ಲ. ಬದುಕು ಸಮಸ್ಯೆಗಳಿಗೆ ವಿಮುಖವಾಗ ಬೇಕಾಗಿಲ್ಲ. ಮುಖಾಮುಖಿಯಾಗುವುದು; ಕರ್ತೃತ್ವಶಕ್ತಿಯಿಂದ ಎದುರಾಗಬಹುದಾದ ವಿಘ್ನಗಳನ್ನು ಮೆಟ್ಟಿ ನಿಲ್ಲುವುದು'. ಹೀಗಾದಾಗ ಬದುಕಿಗೊಂದು ಸಾರ್ಥಕತೆ ಬರುತ್ತದೆ. ಮಾಗಿಯ ಚಳಿ, ಫಾಲ್ಗುಣದ ಬಿಸಿಯುಸಿರಿಗೆ ಸೊರಗಿ ಸೊಪ್ಪಾದ ನಿಸರ್ಗ, ಜೀವಸಂಕುಲ ವಸಂತಾ ಗಮನದ ಕಾರಣದಿಂದಾಗಿ ಸೌಂದರ್ಯದಿಂದ ನಳನಳಿಸುವಂತೆ, ಆನಂದಿಸುವಂತೆ; ಬೇಸರದ ಬದುಕಿಗೆ, ಬರಡಾದ ಬದುಕಿಗೆ, ನೋವುಂಡ ಜೀವಕ್ಕೆ ಸಾಂತ್ವನ ನೀಡಬಹುದೆಂಬ ನಂಬುಗೆ ಯುಗಾದಿ ಹಬ್ಬದ ಆಚರಣೆಗೆ ಮೂಲ ಸೆಲೆಯಾಗಿರಬೇಕು.

ಯುಗಾದಿ ಹಬ್ಬದ ಹೆಗ್ಗಳಿಕೆ ಇರುವುದು ಸಮಷ್ಟಿಯ ಪಾಲ್ಗೊಳ್ಳುವಿಕೆಯಲ್ಲಿ, ಹತ್ತರ ಕೂಡೆ ಹನ್ನೊಂದನೆಯದಾಗಿ ಆಚರಿಸುವ ಜಾಯಮಾನ ಯುಗಾದಿ ಹಬ್ಬಕ್ಕಿಲ್ಲ. ಇದಕ್ಕಿರುವ ಸಾಮಾಜಿಕ ಆಯಾಮ ಕೂಡ ಅಪರೂಪದ್ದು. 'ಹೊರಗೆ ತೋರಣ, ಒಳಗೆ ಹೂರಣ' ಇದು ಹಬ್ಬಗಳನ್ನು ಕುರಿತಾದ ಜನಜನಿತ ನುಡಿ. ಈ ನುಡಿಯ ಸತ್ಯವನ್ನು ನಾವು ಕಾಣುವುದು ಯುಗಾದಿಯ ಆಚರಣೆಯಲ್ಲಿ, ಬಾಗಿಲಿಗೆ ಕಟ್ಟಿದ ತೋರಣ ಭೌತಿಕ ಸೌಂದರ್ಯದ ಸಮೃದ್ಧತೆಗೆ ಸಾಕ್ಷಿಯಾದರೆ, ಒಳಗಿನ ಹೂರಣ ಹೃದಯವಂತಿಕೆಯ ದ್ಯೋತಕವಾಗಿದೆ. 'ಉಂಡಿದ್ದೇ ಉಗಾದಿ, ಮಿಂದದ್ದೇ ದೀಪಾವಳಿ' ಈ ಗಾದೆ ಮಾತು ಹೂರಣದ ಮಹತ್ವವನ್ನು ಮತ್ತಷ್ಟು ಅಧಿಕೃತಗೊಳಿಸುತ್ತದೆ.

ಬೇವು-ಬೆಲ್ಲಗಳ ವಿತರಣೆ ಯುಗಾದಿಯ ಬಹುಮುಖ್ಯ ಆಚರಣೆಗಳಲ್ಲೊಂದು' ಬದುಕಿನ ಸುಖ-ದುಃಖಗಳನ್ನು ಸಮನ್ವಯಿಸಿಕೊಂಡು ಮುಂದುವರಿಯಬೇಕಾದ ಅನಿವಾರ್ಯತೆಯನ್ನು ಈ ಸಿಹಿ-ಕಹಿ ಸಾಂಕೇತಿಸುತ್ತದೆ. ಆಯುಸ್ಸು ವೃದ್ಧಿಗೆ ಬೇವು ಸಹಕಾರಿ, ಮಾತ್ರವಲ್ಲ ಬೇವು ಅನಿಷ್ಟಗಳ ನಿವಾರಕ ಕೂಡ. ತಂಪಿಗಾಗಿ ಬೇವು ಉಷ್ಣಕ್ಕಾಗಿ ಬೆಲ್ಲ. ದೇಹದ ಸಮಶೀತೋಷ್ಣಕ್ಕೆ ಇವು ಸಿದ್ಧೌಷದ,. ಹೀಗಾಗಿ ಯುಗಾದಿ ಬೆಲ್ಲದ ಹಬ್ಬವೂ ಹೌದು ಬೇವಿನ ಹಬ್ಬವೂ ಹೌದು. ಮತ, ಧರ್ಮ, ವರ್ಣ, ವರ್ಗ, ವಯೋಮಾನಗಳ ಲಕ್ಷ್ಮಣ ಗೆರೆಯನ್ನು ದಾಟಿ ಭಾವೈಕ್ಯದ ಬೆಸುಗೆ ಮೂಡಿಸುವಲ್ಲಿ ಯುಗಾದಿ ಹಬ್ಬ ವಹಿಸುವ ಪಾತ್ರ ನಿಜಕ್ಕೂ ಶ್ಲಾಘನೀಯ.

ಉತ್ಸವ ಪ್ರಿಯರಾದ ಈ ನಾಡವರಿಗೆ ಯುಗಾದಿಯ ಹಬ್ಬಕ್ಕಾಗಿ ಮಾಡಿಕೊಳ್ಳುವ ಪೂರ್ವಸಿದ್ಧತೆಯಲ್ಲಿಯೂ ವಿಶೇಷತೆಯುಂಟು. ಯುಗಾದಿ ಮನೆ-ಮನಗಳಿಗೆ ಹರುಷ ತರುವ ಹಬ್ಬ. ಸ್ವಚ್ಛಗೊಳಿಸುವುದರಿಂದ ಹಿಡಿದು ಸುಣ್ಣ-ಬಣ್ಣ ಹಚ್ಚಿ ನೆಲಸಾರಿಸಿ ರಂಗವಲ್ಲಿ ಇಡುತ್ತಾರೆ. ಸಾಲ ಮಾಡಿಯಾದರೂ ಹೊಸ ಬಟ್ಟೆ ಕೊಂಡು ಉಟ್ಟು ಉಡುದಾರ ತೊಟ್ಟು ಸಂತೋಷಪಡುತ್ತಾರೆ. ಅದಕ್ಕೆ ಮೊದಲು ಅಭ್ಯಂಜನ ಸ್ನಾನ ತಮಗಾಗಿ ದುಡಿದ ಎತ್ತು ಹಾಗೂ ದನಕರುಗಳನ್ನು ಮೈತೊಳೆದು ವ್ಯವಸಾಯದ ಉಪಕರಣಗಳನ್ನು ಪೂಜಿಸುವ ಪದ್ಧತಿ ಹಲವು ಕಡೆಗಳಲ್ಲುಂಟು ಹೊನ್ನಾರ ಹೂಡುವುದು ಬಿಡದೆ ನಡೆಸಿಕೊಂಡು ಬಂದಿರುವ ಸಂಪ್ರದಾಯ. ನೊಗ ಹೂಡಿದ ಜೋಡೆತ್ತುಗಳ ಹಗ್ಗವನ್ನು ಕೈಯಲ್ಲಿ ಹಿಡಿದುಕೊಂಡು ನೇಗಿಲನ್ನು ಹೆಗಲ ಮೇಲೆ ಹೊತ್ತು ಹೊನ್ನಾರಿಗೆ ಹೊರಡುವ ಒಕ್ಕಲ ಮಗನ ಸಂಭ್ರಮ ಅವನ ಬದುಕಿನ ವಿಶೇಷತೆಗಳಲ್ಲೊಂದು. ಅಂದು ದೇವಾಲಯಗಳಲ್ಲಿ ವಿಶೇಷ ಪೂಜೆ ದೇವರಿಗೆ ವಿಶೇಷ ಅಲಂಕಾರ ಹಲವು ದೇವರಗಳ ಉತ್ಸವಗಳು ನಡೆಯುವುದುಂಟು. ಕೆಲವು ಕಡೆ ನವಗ್ರಹ ಧಾನ್ಯಗಳನ್ನು ದಾನ ನೀಡುವುದು ಇದೆ.

ಯುಗಾದಿ ಅಮವಾಸ್ಯೆಯ ಮರುದಿನ ಚಂದ್ರದರ್ಶನ ಶ್ರೇಯಸ್ಕರವೆಂಬುದೊಂದು ನಂಬಿಕೆ. ಹಬ್ಬದೂಟ ಉಂಡು ಚಂದ್ರದರ್ಶನಕ್ಕಾಗಿ ಕುತೂಹಲದಿಂದ ಕಾಯ್ದು ನಿಲ್ಲುವ ಜನಸಮೂಹ ಚಂದ್ರದರ್ಶನವಾದರಂತೂ ಅವರ ಸಂಭ್ರಮ, ಸಡಗರ ಹೇಳತೀರದು. ಚಂದ್ರನಿಗೆ ಪೂಜೆ ಸಲ್ಲಿಸಿದ ನಂತರ ಬೇವು-ಬೆಲ್ಲದ ವಿತರಣೆಗೆ ಮುಂದಾಗುತ್ತಾರೆ. ಸಾಯಂಕಾಲ ಯಥಾಪ್ರಕಾರ ಪಂಚಾಂಗ ಶ್ರವಣ, ಶುಭಾಶಯ ವಿನಿಮಯ ಯುಗಾದಿಯ ಸಂತೋಷದಲ್ಲಿ ಹಲವು ವಿಶೇಷ ಬಗೆಯ ಆಟಗಳನ್ನೂ ಆಡುವುದಿದೆ. 'ಜೀವನವೇ ಬೇವು-ಬೆಲ್ಲ ಎರಡನ್ನೂ ಸವಿವನೇ ಕವಿಮಲ್ಲ'





# ಜೀವಿಯ ಜೀವನಾಧಾರ ಜಲ – ಜಲತತ್ವ

-ಜಿ.ವಿ.ವಿ. ಶಾಸ್ತ್ರಿ

- ಮುಂದುವರೆದ ಭಾಗ

'ನಿಸರ್ಗ ಯೋಗಧಾಮ' ನಂ. ೨/೨೦೫೯, ೧೧ನೇ ಕ್ರಾಸ್,
ಎಸ್.ಎಸ್.ಪುರಂ, ತುಮಕೂರು -೫೭೨ ೧೦೨.

*ನೀರಿನ ಮತ್ತೊಂದು ಹೆಸರು 'ಜೀವನ'*
*ಅದಿಲ್ಲದೆ ನಡೆಯದು ಮನುಜನಾ ಜೀವನ*
*ನೀರು ಬರಿಯ ನೀರಲ್ಲ ನೀರೆ*
*ಔಷಧವಾಗಿಯೂ ಅದನೆ ಬಳಸು ಬಾರೆ*

'ನೀರಿನ ಬಗ್ಗೆ ನೀವು ಹೇಳುವುದು ಏನಿದೆ? ನಮಗೆ ನೀರಿನ ಬಗ್ಗೆ ಗೊತ್ತಿಲ್ಲವೇ? ನೀರಿಲ್ಲದೇ ಬದುಕು ನಡೆದೀತೇ? ಅಡುಗೆ ಮಾಡಲು, ಪಾತ್ರೆ ತೊಳೆಯಲು, ಸ್ನಾನಕ್ಕಾಗಿ, ಕುಡಿಯಲು'.

ನೀರಿನ ಉಪಯೋಗ ಇಷ್ಟೇ ಏನು?

'ಬೆಳೆ ಬೆಳೆಯಲು, ಕಾಡು ಉಳಿಯಲು, ಒಂದೇ-ಎರಡೇ ಅದರ ಉಪಯೋಗ?'.

ಪಂಚಭೂತಗಳಲ್ಲಿ ಒಂದಾದ ನೀರು, ಜೀವಿಯ ಹುಟ್ಟಿಗೂ ಬೆಳವಣಿಗೆಗೂ ಕಾರಣವಾಗಿದೆ. ಅದರ ವಿಷಯದಲ್ಲಿ ನಮ್ಮ ಜ್ಞಾನ ಪರಿಪೂರ್ಣವೆಂಬ ಭಾವನೆಯು ಸತ್ಯಕ್ಕೆ ದೂರ. ಆರೋಗ್ಯದಲ್ಲಿ ಅದು ಆಹಾರ, ಅನಾರೋಗ್ಯದಲ್ಲಿ ಅದು ಔಷಧಿ.

'ಅಷ್ಟಲ್ಲದೇ ನಮ್ಮ ಹಿಂದಿನವರು ನಿತ್ಯವೂ ಪಠಿಸುತ್ತಿದ್ದರೇನ್ರೀ,
*ಶರೀರೇ ಜರ್ಝರೀ ಭೂತೇ ವ್ಯಾಧಿಗ್ರಸ್ತೇ ಕಳೇಬರೇ।*
*ಔಷಧಂ ಜಾಹ್ನವೀ ತೋಯಂ ವೈದ್ಯೋ ನಾರಾಯಣೋ ಹರಿಃ॥*- ಎಂದು

ಮಂತ್ರದಂತೆ ಇದನ್ನೂ ಗಿಳಿಪಾಠದಂತೆ ಒಪ್ಪಿಸಿದರೆ ತೀರಿತೆ? ಜ್ವರ ಬಂದಾಗ ಯಥಾ ಪ್ರಕಾರ 'ಸ್ನಾನ ಮಾಡಬೇಡ' ಎಂಬುದೇ ಮಂತ್ರ, ಹಿರಿಯರು ತಮಗೆ ಜ್ವರ ಬಂದಾಗ ಸ್ನಾ ಮಾಡಿದರೂ ಮಾಡುತ್ತಿದ್ದರು, ಆದರೆ ಮಕ್ಕಳಿಗೆ ಸ್ನಾನ ಮಾಡಿಸುತ್ತಿರಲಿಲ್ಲ. ತಾವು ಮಾಡುತ್ತಿದ್ದ ಸ್ನಾನವಾದರೂ ಎಂತಹುದು? ಬಿಸಿನೀರಿನ ಸ್ನಾನ. ಅದೂ ಸಹ ಮಡಿಗಾಗಿ, ಅಂದರೆ ನಮ್ಮ ಹಿರಿಯರಿಗೆ ಇದರ ಬಗ್ಗೆ ತಿಳಿವಳಿಕೆಯು ಇರಲಿಲ್ಲವೇ?.

ನಮ್ಮ ನಾಗರೀಕತೆ ಬೆಳೆದಿದ್ದೇ ನದೀ ತೀರಗಳಲ್ಲಿ. ನದಿಗಳಿಂದ ದೂರ ಆಗುತ್ತಾ ಆಗುತ್ತಾ ನೀರಿನ ಬಗ್ಗೆ ನಮ್ಮ ಒಲವು ದೂರವಾಗುತ್ತಾ ಬಂತು. ವೇದಗಳಲ್ಲಿರುವ ಸೂಕ್ತಗಳು ನಮ್ಮ ನೀರಿನ ಬಗ್ಗೆಯ ಜ್ಞಾನ, ಪ್ರೀತಿ ಇತ್ಯಾದಿಗಳ ದ್ಯೋತಕ.

*ಅಪ್ಸು ಮೇ ಸೋಮೋ ಅಬ್ರವೀತ್ ಅಂತರ್*
*ವಿಶ್ವಾನಿ ಭೇಷಜಂ । ಅಪಶ್ಚ ವಿಶ್ವ ಭೇಷಜಿ ॥*

ನೀರಿನಲ್ಲಿ ಜಗತ್ತಿನ ಔಷಧವು' ಅಡಗಿದೆ ಎಂದು ಸೋಮನು ಹೇಳಿದನು.

ನೀರಿನ ಅವಶ್ಯಕತೆಯೇ ಬೇರೆ, ಅದರ ಬಗೆಗಿನ ಜ್ಞಾನವೇ ಬೇರೆ. ನೀರನ್ನು ಅವಶ್ಯಕತೆಯಿರುವುದರಿಂದ ಬಳಸುತ್ತಿದ್ದೇವೆ. ಜ್ಞಾನದಿಂದ ವಂಚಿತರಾಗಿದ್ದೇವೆ. ಸಾಮಾನ್ಯವಾಗಿ ಪಂಚಭೂತಗಳ ಬಗ್ಗೆ ನಮ್ಮ ಜ್ಞಾನವು ಕಡಿಮೆ ಇರುವುದರಿಂದ ಅವುಗಳನ್ನು ಪೂರ್ಣವಾಗಿ ಉಪಯೋಗ ಮಾಡಿಕೊಳ್ಳಲು ಸಾಧ್ಯವಾಗುತ್ತಿಲ್ಲ.

ಬರೀ ಭಾರತೀಯವೇ ಅಲ್ಲ, ಮಾನವ ಸಂಸ್ಕೃತಿಯ ಉಗಮವೇ ನದೀ ದಡಗಳಲ್ಲಿ ಜೀವಿಯ ಹುಟ್ಟೂ ಸಹ ನೀರಿನಲ್ಲಿಯೇ. ಅದರ ಸಂಕೇತವೇ ಮೊದಲನೆಯದು- ಮತ್ಸ್ಯಾವತಾರ. ಭಾರತೀಯ ಸಂಸ್ಕೃತಿಯು ನೀರನ್ನು ದೇವತಾ ಸ್ವರೂಪದಿಂದ ಪೂಜಿಸುತ್ತದೆ. ಪುರಾಣಗಳಲ್ಲಿ ಜಲದೇವತೆ ವರುಣ. ಅವನು ಸಮುದ್ರರಾಜ. ಗಂಗಾದೇವಿ ಅವನ ಪತ್ನಿ. ಪ್ರತಿ ಪೂಜೆ, ವ್ರತ, ಸಂಸ್ಕಾರ, ಪಿತೃ ಕಾರ್ಯಗಳು- ಗಂಗೆಯ ಪೂಜೆಯಿಲ್ಲದೆ ಪ್ರಾರಂಭವಾಗುವುದಿಲ್ಲ. ನೀರಿನ ಬಗ್ಗೆ ಅನೇಕ 'ಋಕ್‌ಗಳು' ವೇದದಲ್ಲಿವೆ.

'ಆಪೋವಾ ಇದಗ್ಂ ಸರ್ವಂ, ವಿಶ್ವಭೂತಾನ್ಯಾಪಃ, ಅನ್ನಮಾಪಃ, ಛಂದಾಂಸಿ ಆಪಃ'- ವಿಶ್ವವೆಲ್ಲವೂ ನೀರಿನಿಂದಲೇ ಆಗಿದೆ. ಅನ್ನವೂ ಸಹ ನೀರಿನಿಂದ, ಮಾತೂ ಸಹ ನೀರಿನಿಂದಲೇ ಬಾಯಿಯಲ್ಲಿಯ ದ್ರವವು ಒಣಗಿದರೆ ಮಾತು ಬರುವುದೇ? ಭಗವದ್ಗೀತೆಯಲ್ಲಿ ಶ್ರೀಕೃಷ್ಣನು 'ರಸೋಹಮಪ್ಸು'- 'ನಾನು ನೀರಿನ ರೂಪದಲ್ಲಿದ್ದೇನೆ' ಅಂದಿದ್ದಾನೆ. ಪಂಚಭೂತಗಳನ್ನು ಆಧಾರವಾಗಿ ಹೊಂದಿರುವ ಆಯುರ್ವೇದವು ಸಮುದ್ರದ ಆಳಕ್ಕೆ ಮುಳುಗಿ ಅನೇಕ ಮುತ್ತು ರತ್ನಗಳನ್ನು ತಂದಿದೆ.

*ಪಾನೀಯಂ ಪ್ರಾಣಿನಾಂ ಪ್ರಾಣಾಃ ವಿಶ್ವಮೇವ ಚ ತನ್ಮಯಂ।*
*ನಹಿ ತೋಯಾದ್ವಿನಾವೃತ್ತಿಃ ಸ್ವಸ್ಥಸ್ಯ ವ್ಯಾಧಿತಸ್ಯ ವಾ॥*
-ಅಷ್ಟಾಂಗ ಸಂಗ್ರಹ

ನೀರು ಪ್ರಾಣಿಗಳ ಪ್ರಾಣ. ವಿಶ್ವವೆಲ್ಲವೂ ನೀರಿನಿಂದ ಕೂಡಿದೆ. ಆರೋಗ್ಯದಲ್ಲಿ ಆಗಲಿ, ಅನಾರೋಗ್ಯದಲ್ಲೇ ಆಗಲಿ ನೀರಿಲ್ಲದೆ ಬದುಕು ಸಾಧ್ಯವಿಲ್ಲ.

ನೀರಿನ ಹಿಂದಿರುವ ತತ್ವ – ಜಲ ತತ್ವ ಅಥವಾ ಅಪ್ ತತ್ವ, ಆ ತತ್ವವನ್ನು ವಾಗ್ಭಟಾಚಾರ್ಯರು ಈ ರೀತಿ ವರ್ಣಿಸಿದ್ದಾರೆ.

*ದ್ರವ ಶೀತ ಗುರು ಸ್ನಿಗ್ಧ ಮಂದ್ರ ಸಾಂದ್ರ ಗುಣೋಲ್ಬಣಂ।*
*ಆಪ್ಯಂ ಸ್ನೇಹನ ವಿಷ್ಯಂದ ಕ್ಲೇದ ಪ್ರಹ್ಲಾದ ಬಂಧಕೃತ್ ॥*

–ಅಷ್ಟಾಂಗ ಹೃದಯ(ಅಧ್ಯಾಯ 9, ಶ್ಲೋಕ 6.)

ಯಾವ ವಸ್ತುವಿನಲ್ಲಿ ದ್ರವ-ಚಲನೆಯುಳ್ಳದ್ದು, ಶೀತ- ತಂಪು, ಗುರು –ಭಾರ ಸ್ನಿಗ್ಧ –ಅಂಟುವ ಗುಣ, ಮಂದ್ರ – ನಿಧಾನ ಚಲನೆ, ಸಾಂದ್ರ- ದಟ್ಟ ರಚನೆ, ಇರುವುದೋ ಅದು ಆಪ್ಯವೆನಿಸುವುದು. ಅದರ ಸೇವನೆಯಿಂದ ಶರೀರ ಮತ್ತು ಮನಸ್ಸಿನಲ್ಲಿ, ಸ್ನೇಹನ- ಅಂಟುವ ಗುಣ, ವಿಷ್ಯಂದ – ಜಿನುಗುವುದು, ಕ್ಲೇದ – ಹಸಿತನ, ಪ್ರಹ್ಲಾದ – ಉಲ್ಲಾಸ, ಬಂಧಕೃತ್ – ಒಗ್ಗೂಡಿಸುವಿಕೆ, ಅದರಿಂದ ಬಿಗುಹು ಉಂಟಾಗುವುವು.

ಈ ಗುಣಗಳಿಂದ ಕೂಡಿದ ನೀರನ್ನು ನಮ್ಮ ಜೀವಿತಕ್ಕೂ, ರೋಗ ಬಂದಾಗ ಆಯಾ ಗುಣಗಳನ್ನು ಅನುಸರಿಸಿ ಉಪ ಚಾರಕ್ಕೂ ಬಳಸಿಕೊಳ್ಳಬೇಕು.

ಪಾಶ್ಚಿಮಾತ್ಯ ದೇಶಗಳಲ್ಲಿಯೂ ಸಹ ನೀರಿನ ಉಪಯೋಗ ವನ್ನು ಬಹಳ ಹಿಂದಿನಿಂದಲೂ ಮಾಡಿಕೊಂಡು ಬಂದಿದ್ದಾರೆ. ಗ್ರೀಸ್ ದೇಶದಲ್ಲಿ ತಣ್ಣೀರಿನ ಸ್ನಾನವನ್ನು ಕಾನೂನಿನ ಮುಖಾಂತರ ಎಲ್ಲರೂ ಮಾಡಲೇಬೇಕೆಂಬ ಒತ್ತಡ ತಂದಿದ್ದರು. ರೋಮ್ ದೇಶದ ಉಚ್ಛ್ರಾಯ ಕಾಲದಲ್ಲಿ ನಗರದ ಮೂಲೆ ಮೂಲೆಗಳಲ್ಲೂ ದೊಡ್ಡ ದೊಡ್ಡ ಸ್ನಾನದ ಗೃಹಗಳನ್ನು ಕಟ್ಟಿಸಿದ್ದರು. ಒಂದೊಂದು ಗೃಹದಲ್ಲಿಯೂ ಒಮ್ಮೆಗೇ ಅನೇಕ ಜನರು ಸ್ನಾನ ಮಾಡಬಹುದಿತ್ತು. ಹಿಬ್ರೂ ಜನರ ಕೊಳಗಳಿಗೆ ವೆದೆಸ್ತಾ (Vedesta) ಎಂದು ಹೆಸರು. ಅದನ್ನು ಕಿನ್ನರಿಯರು ಕಾವಲು ಕಾಯುವವರೆಂದು ಅವರ ನಂಬಿಕೆ. ಮಧ್ಯ ಯುಗದಲ್ಲಿ ಅರೇಬಿಯಾ ದೇಶದ ವೈದ್ಯರುಗಳಾದ ಅವಿಸೆನ್ನಾ (Avicenna) ಮತ್ತು ರೇಜಸ್ (Rhezas) ಗಳೂ ಸಹ ಸ್ನಾನದ ಉಪಯೋಗದ ಬಗ್ಗೆ ಬರೆದಿದ್ದಾರೆ.

ಪಾಶ್ಚಿಮಾತ್ಯ ಪ್ರಕೃತಿ ಚಿಕಿತ್ಸೆಯು ಹಿಂದೆ ತಿಳಿಸಿದಂತೆ ಪ್ರಥಮವಾಗಿ ಮುಖ್ಯವಾಗಿ ಜಲಚಿಕಿತ್ಸೆಯೇ ಆಗಿತ್ತು. Hudos= Greek word for Water. ಇದರಿಂದ ಹುಟ್ಟಿದ್ದು Hydropathy ನವೀನ ಜಲಚಿಕಿತ್ಸೆಯು ಜರ್ಮನಿಯಿಂದ ಪ್ರಾರಂಭವಾಯಿತು. ಪ್ರಿಸ್ನಿಜ್ ನಿಂದ ಪ್ರಾರಂಭವಾಗಿ, ಷಿಂಡ್ಲರ್, ನೆಪ್, ಕುನ್ಹೆ, ಹಾಲ್, ಟರ್ನರ್, ವಿಲ್ಸನ್ ಮುಂತಾದವರು ಮುಂದುವರೆಸಿದರು.

–ಮುಂದುವರೆಯುತ್ತದೆ.

## ಅತ್ಯುತ್ತಮ ಶಿಕ್ಷಕ ಪ್ರಶಸ್ತಿ



ಶ್ರೀ ಸಿದ್ಧಗಂಗಾ ಮಠದ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆಯಲ್ಲಿ ಸಹ ಶಿಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ **ಶ್ರೀ ಕೆ.ಬಿ. ಶಿವಶಂಕರಯ್ಯನವರು** ವಿದ್ಯಾರ್ಥಿಗಳಲ್ಲಿ ಸ್ಪರ್ಧಾತ್ಮಕ ಮನೋಭಾವನೆಯನ್ನು ಹಾಗೂ ಸಾಮಾನ್ಯ ಜ್ಞಾನವನ್ನು ಹೆಚ್ಚಿಸಲು ವಿಶೇಷ ತರಬೇತಿ ಹಾಗೂ ಸೂಕ್ತ ಮಾರ್ಗದರ್ಶನ ನೀಡುತ್ತಿರುವ ಹಾಗೂ ವಿದ್ಯಾರ್ಥಿಗಳ ಅಭಿವೃದ್ಧಿಗಾಗಿ ವಿಶೇಷವಾಗಿ ಶ್ರಮಿಸುತ್ತಿರುವ ಕ್ರಿಯಾಶೀಲ ಹಾಗೂ ಆದರ್ಶ ಶಿಕ್ಷಕರು. **'ಶಿಕ್ಷಣ ತಜ್ಞ ಡಾ॥ ರಾಧಾಕೃಷ್ಣನ್ ಪ್ರಶಸ್ತಿ'** ಪುರಸ್ಕೃತರಾದ ಶ್ರೀಯುತರ ಅಮೂಲ್ಯವಾದ ಪ್ರತಿಭೆ ಮತ್ತು ಸೇವೆಗಳನ್ನು ಗುರುತಿಸಿ ಬೆಂಗಳೂರಿನ ಕರ್ನಾಟಕ ಪ್ರತಿಭಾ ಅಕಾಡೆಮಿಯು **ಶ್ರೀ ಕೆ.ಬಿ. ಶಿವಶಂಕರಯ್ಯನವರಿಗೆ** ದಿನಾಂಕ 24-02-2008ರಂದು **'ಅತ್ಯುತ್ತಮ ಶಿಕ್ಷಕ ಪ್ರಶಸ್ತಿ'** ಯನ್ನು ಪ್ರಧಾನ ಮಾಡಿ ಗೌರವಿಸಿದೆ ಎಂದು ತಿಳಿಸಲು 'ಸಿದ್ಧಗಂಗಾ' ಸಂತೋಷಿಸುತ್ತದೆ.

## ವಚನಗಳು

ಕಷ್ಟಕುಲದಲ್ಲಿ ಹುಟ್ಟಿದ ಕರ್ಮವ ಕಳೆದು, ಮುಟ್ಟ
ಪಾವನವ ಮಾಡಿ ಕೊಟ್ಟನಯ್ಯ ಎನ್ನ ಕರಸ್ಥಲಕ್ಕೆ
ಲಿಂಗವ. ಆ ಲಿಂಗ ಬಂದು ಸೋಂಕಲೊಡನೆ
ಎನ್ನ ಸರ್ವಾಂಗದ ಅವಲೋಹವಳಿಯತ್ತಯ್ಯ !
ಎನ್ನ ತನುವಿನಲ್ಲಿ ಗುರುವ ನೆಲೆಗೊಳಿಸಿದ; ಎನ್ನ
ಮನದಲ್ಲಿ ಜಂಗಮವ ನೆಲೆಗೊಳಿಸಿದ; ಎನ್ನ
ಅರಿವಿನಲ್ಲಿ ಪ್ರಸಾದವ ನೆಲೆಗೊಳಿಸಿದ. ಇಂತೀ
ತ್ರಿವಿಧ ಸ್ಥಾನವ ಶುದ್ಧವ ಮಾಡಿದ ಬಸವಣ್ಣನ
ಕರುಣದಿಂದ

–ಡೋಹರ ಕಕ್ಕಯ್ಯ





## ಶ್ರೀ ಸಿದ್ಧಗಂಗಾ ಮಠದ ಶಾಶ್ವತ ದಾಸೋಹ ನಿಧಿಗೆ ಉದಾರವಾಗಿ ಕಾಣಿಕೆ ನೀಡಿದ ಮಹನಿಯರುಗಳು

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ | ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|---|---|---|
| 4620. | ಶ್ರೀಮತಿ ಎಂ.ಕೆ. ಇಂದಿರಾಬಾಯಿ,<br>ಗದ್ದನಕೇರಿ, ಬಾಗಲಕೋಟೆ ತಾ & ಜಿಲ್ಲೆ. | 2,001.00 | 4638. | ಶ್ರೀ ನಾಗರತ್ನ ಲಕ್ಷ್ಮಿಪತಿ<br>ಸುಣ್ಣಕಲ್ ಪೇಟೆ ಕ್ರಾಸ್, ಬೆಂಗಳೂರು. | 1,002.00 |
| 4621. | ಶ್ರೀ ಕೆ.ಎಂ. ಮನ್ನಿಕೇರಿ,<br>ಗದ್ದನಕೇರಿ, ಬಾಗಲಕೋಟೆ ತಾ & ಜಿಲ್ಲೆ. | 2,001.00 | 4639. | ಶ್ರೀ ಕೆ.ಸಿದ್ಧಗಂಗಯ್ಯ,<br>2ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು. | 10,000.00 |
| 4622. | ಶ್ರೀ ಐ.ಎಸ್. ಮೃತ್ಯುಂಜಯ, ಲೇಟ್ ಐಗೂರು ಸುಬ್ಬಗೌಡ<br>ದೊಮ್ಮಲೂರು ಲೇಔಟ್, ಬೆಂಗಳೂರು. | 100,000.00 | 4640. | ಶ್ರೀ ರುದ್ರಗೌಡಶಿವನಗೌಡ ರಾಮನಗೌಡ್ರ,<br>ಚಿಕ್ಕುಳ್ಳಿಗೆರೆ, ಸವದತ್ತಿ ತಾ॥ ಬೆಳಗಾಂ ಜಿಲ್ಲೆ. | 20,000.00 |
| 4623. | ಶ್ರೀ ಕೆ.ಆರ್. ವೀರಭದ್ರಸ್ವಾಮಿ<br>ಜೆ.ಪಿ. ನಗರ, 7ನೇ ಫೇಸ್, ಬೆಂಗಳೂರು. | 5,001.00 | 4641. | ಶ್ರೀ ಕೆ.ಎಸ್. ಚಂದ್ರಶೇಖರಯ್ಯ ಬಿನ್ ಶಿವಣ್ಣ, ಕಂಡಕ್ಟರ್,<br>ಕದರನಹಳ್ಳಿ, ಲಕ್ಷ್ಮಿಪುರ ಅಂ., ಬೆಂಗಳೂರು. | 1,001.00 |
| 4624. | ಶ್ರೀ ಕೆ.ಪಿ. ನಟರಾಜ್<br>ಬಾಪೂಜಿನಗರ, ಮೈಸೂರು ರಸ್ತೆ, ಬೆಂಗಳೂರು. | 2,001.00 | 4642. | ಶ್ರೀ ಪಿ. ಮಂಜುನಾಥ್<br>ಮಹಾಲಕ್ಷ್ಮಿನಗರ, ಬಟವಾಡಿ, ತುಮಕೂರು. | 2,501.00 |
| 4625. | ಶ್ರೀ ಬಿ. ರಂಗಪ್ಪ, ನಿ.ಶಿಕ್ಷಕರು,<br>ಗುರುಕುಲ ಬಡಾವಣೆ, ಜ್ಯೋತಿನಗರ, ಶಿರಾ. | 3,000.00 | 4643. | ಶ್ರೀ ಎಸ್.ಎನ್. ಅಂಕಣ್ಣರೆಡ್ಡಿ,<br>ಕೋರಮಂಗಲ 4ನೇ ಬ್ಲಾಕ್, ಬೆಂಗಳೂರು. | 5,001.00 |
| 4626. | ಶ್ರೀ ಜೆ.ಸಿ. ಉಮಾಶಂಕರ್, ಇ.ಎಸ್.ಕ್ಯೂ.<br>ವಸಂತ್‌ನಗರ್, ಬೆಂಗಳೂರು. | 25,000.00 | 4644. | ಶ್ರೀ ಹನುಮಂತರಾವ್ ಸಿ. ಇಂಗಿನಶೆಟ್ಟಿ<br>ಶಾಹಬಾದ್ ಮುಖ್ಯರಸ್ತೆ, ಗುಲ್ಬರ್ಗಾ ಜಿಲ್ಲೆ. | 2,100.00 |
| 4627. | ಶ್ರೀ ಡಿ.ಎಸ್. ರಾಜೇಂದ್ರ, ಹಿರಿಯಶ್ರೇಣಿ ಉಪನ್ಯಾಸಕರು,<br>ಎಸ್.ಐ.ಟಿ. ಬಿ.ಹೆಚ್.ರಸ್ತೆ, ತುಮಕೂರು. | 8,500.00 | 4645. | ಶ್ರೀ ಸಂಗಪ್ಪನವರ ಮಕ್ಕಳಾದ ಶ್ರೀ ಜಿ.ಎಸ್. ಗಂಗಾಧರ್<br>ಮತ್ತು ಶ್ರೀ ಯಲಚೇನಹಳ್ಳಿ,<br>ಕನಕಪುರ ರಸ್ತೆ, ಬೆಂಗಳೂರು. | 1,00,000.00 |
| 4628. | ಶ್ರೀ ಚಂದ್ರಶೇಖರಯ್ಯ ಬಸಯ್ಯ ಪಾಟೀಲ<br>ವಿದ್ಯಾನಗರ, 3ನೇ ಮುಖ್ಯರಸ್ತೆ, ಹಾವೇರಿ. | 2,000.00 | 4646. | ಕು॥ ಸುನಿಧಿ ಬಿ.ಎಸ್., ಬಿನ್ ಬಿ.ಸಿ. ಶ್ರೀಕಂಠದೇವರು,<br>ಜಯನಗರ, 4ನೇ ಬ್ಲಾಕ್, ಬೆಂಗಳೂರು. | 2,117.00 |
| 4629. | ಪರಶಿವ ಹೆಲ್ತ್ ಸೆಲ್ಯೂಶನ್ಸ್,<br>ಮಾರೇನಹಳ್ಳಿ, ವಿಜಯನಗರ, ಬೆಂಗಳೂರು. | 2,000.00 | 4647. | ಶ್ರೀ ಎಸ್.ಸಿ. ಶಂಕರಪ್ಪ, ಡಿ.ವೈ.ಎಸ್.ಪಿ. ನಿವೃತ್ತ,<br>2ನೇ ಸ್ಟೇಜ್, ರಾಜಾಜಿನಗರ, ಬೆಂಗಳೂರು. | 10,000.00 |
| 4630. | ಶ್ರೀ ಎನ್.ಟಿ. ವೀರಭದ್ರಪ್ಪ ಕೇರಾಫ್ ದುಂಡಯ್ಯ<br>ಗದ್ದನಕೇರಿ ಗ್ರಾಮ& ಅಂ., ಬಾಗಲಕೋಟೆ ತಾ. | 20,000.00 | 4648. | ಡಾ॥ ಎ. ಮುರಿಗೆಪ್ಪ, ಸಹಸಂಶೋಧನ ನಿರ್ದೇಶಕರು,<br>ಪಶುವೈದ್ಯಕೀಯ ಮಹಾವಿದ್ಯಾಲಯ, ತಿಪಟೂರು. | 2,001.00 |
| 4631. | ಸಂಚಾಲಕರು, ಸಂಯುಕ್ತ ವಿದ್ಯಾರ್ಥಿ ಸಂಘ ಸನಿವಾಸ ವಿದ್ಯಾ<br>ಸಂಸ್ಥೆಗಳು, ಶ್ರೀ ಸಿದ್ಧಗಂಗಾ ಮಠ. | 1,500.00 | 4649. | ಶ್ರೀ ನೀಲಲೋಚನಾಶ್ರೀ ಬಸವರಾಜ ಗುರುಬಸವಯ್ಯ<br>ತೆಲಸಂಗ, ಸ್ವದೇಶಿ ವಸ್ತ್ರ ಭಂಡಾರದ ಮಾಲೀಕರು,<br>ಅಥಣಿ. | 2,111.00 |
| 4632. | ಡಾ॥ ಚಿನ್ಮಯ ಪಿ. ಚಿಗಟೇರಿ ಬಿನ್ ಪ್ರಭುದೇವ ಜಿ.ಚಿಗಟೇರಿ<br>ನಂದಿದುರ್ಗ ರಸ್ತೆ, ಬೆನ್‌ಸನ್ ಟೌನ್, ಬೆಂಗಳೂರು. | 2,001.00 | 4650. | ಶ್ರೀ ಡಿ.ಎಸ್. ರಾಜೇಂದ್ರ, ಹಿರಿಯಶ್ರೇಣಿ ಉಪನ್ಯಾಸಕರು,<br>ಎಸ್.ಐ.ಟಿ. ಬಿ.ಹೆಚ್.ರಸ್ತೆ, ತುಮಕೂರು. | 8,500.00 |
| 4633. | ಶ್ರೀಮತಿ ಸರೋಜಮ್ಮ<br>ಎಂ.ಸಿ. ಲೇಔಟ್, ವಿಜಯನಗರ, ಬೆಂಗಳೂರು. | 1,000.00 | 4651. | ಶ್ರೀ ಎಸ್. ಹೇಮಂತ್<br>ಭುವನೇಶ್ವರಿ ನಗರದ ಎದುರು, ಬೆಂಗಳೂರು. | 10,001.00 |
| 4634. | ಶ್ರೀ ಕಂಭೇಗೌಡ ಬಿನ್ ತಿಮ್ಮೇಗೌಡ,<br>ಮಾಕಳಿ, ಚನ್ನಪಟ್ಟಣ ತಾಲ್ಲೂಕು, ಬೆಂ.ಗ್ರಾ.ಜಿ. | 1,000.00 | 4652. | ಶ್ರೀ ಡಿ.ಎಸ್. ಸಿದ್ಧವೀರಯ್ಯ, ಜೂನಿಯರ್ ಇಂಜಿನಿಯರ್,<br>ವಿಜಯಾನಂದನಗರ, ಬೆಂಗಳೂರು. | 10,001.00 |
| 4635. | ಆಡಳಿತಾಧಿಕಾರಿಗಳು,<br>ಶ್ರೀ ಸಿದ್ಧಗಂಗಾಮಠ, ತುಮಕೂರು ತಾಲ್ಲೂಕು. | 4,500.00 | 4653. | ಶ್ರೀ ರಾಜಣ್ಣ ಎಂ. ಸ.ಶಿ., ಶ್ರೀ ಸಿದ್ಧಗಂಗಾ ಸಂಸ್ಕೃತ<br>ಮಹಾಪಾಠಶಾಲೆ, ಚಿಕ್ಕಮಸ್ಕಲ್, ಮಾಗಡಿ ತಾ. | 2,000.00 |
| 4636. | ಶ್ರೀ ಡಿ.ಎಂ. ಶ್ರೀಕಂಠಮೂರ್ತಿ,<br>ಬಿ.ಎಸ್.ಕೆ. 3ನೇ ಸ್ಟೇಜ್, ಬೆಂಗಳೂರು. | 1,000.00 | 4654. | ಶ್ರೀ ರಂಗಪ್ಪ<br>2ನೇ ಸ್ಟೇಜ್, ಚಂದ್ರಲೇಔಟ್, ಬೆಂಗಳೂರು. | 2,001.00 |
| 4637. | ಶ್ರೀ ವೈ.ಎಂ. ಲೀಲಾಂಬ<br>90ನೇ ಕ್ರಾಸ್, 2ನೇ ಸ್ಟೇಜ್, ಬೆಂಗಳೂರು. | 1,00,101.00 | 4655. | ಶ್ರೀ ಬಿ.ಎನ್. ನಾಗೇಂದ್ರ, ಜಮೀನ್ದಾರ್,<br>ಬಾಗಲೂರು & ಪೋಸ್ಟ್, ಬೆಂ. ಉತ್ತರ ತಾ॥ | 1,001.00 |

ಮುಂದುವರೆಯುತ್ತದೆ.

## ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಶತಮಾನೋತ್ಸವ ನಿಧಿಗೆ ಉದಾರವಾಗಿ ಕಾಣಿಕೆ ನೀಡಿದ ಮಹನಿಯರುಗಳು

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 1636. | ಟಿ.ಎನ್. ಈಶ್ವರಯ್ಯ, ಕೋತಲದಿಣ್ಣೆ ಅಟ್ & ಪೋಸ್ಟ್, ಹೊಸೂರು ಹೋ ಗೌರಿಬಿದನೂರು ತಾ॥ ಕೋಲಾರ ಜಿಲ್ಲೆ. | 501.00 |
| 1637. | ಶ್ರೀ ಡಿ.ಬಿ. ಸೋಮಪ್ಪ, ನಿವೃತ್ತ ಶಿಕ್ಷಕರು, ಗುಡುಗಳಲೆ, ಶನಿವಾರಸಂತೆ ಹೊ & ಅಂಚೆ. | 1,001.00 |
| 1638. | ಶ್ರೀ ಸತ್ಯನಾರಾಯಣ ಬಿನ್ ರಂಗೇಗೌಡ ನಂಜೇದೇವರ ಕಾವಲ್, ಕುಪ್ಪಳ್ಳಿ ಅಂ. ಹಾಸನ. | 1,001.00 |
| 1639. | ಶ್ರೀ ಅಭಿಲಾಷ್ ಕೇರಾಫ್ ವಿಜಯಕುಮಾರಿ ಕಾವಲ್ ಬೈರಸಂದ್ರ, ಬೆಂಗಳೂರು. | 1,001.00 |
| 1640. | ಶ್ರೀ ಶಿವಕುಮಾರ್ ಗಾಂಧಿನಗರ ಮುಖ್ಯರಸ್ತೆ, ಭದ್ರಾವತಿ. | 1,501.00 |
| 1641. | ಶ್ರೀಮತಿ ದಾಕ್ಷಾಯಣಮ್ಮ ಕೋಂ. ಲೇಟ್ ವಿರೂಪಾಕ್ಷಯ್ಯ ಎಲ್.ಐ.ಸಿ. ಕಾಲೋನಿ, ಜಯನಗರ, ಬೆಂಗಳೂರು. | 5,000.00 |
| 1642. | ಶ್ರೀ ಚನ್ನಬಸವಯ್ಯ, ನಿವೃತ್ತ ಶಿಕ್ಷಕರು, ಮಲ್ಲರಬಾಣವಾಡಿ &ಪೋಸ್ಟ್, ನೆಲಮಂಗಲ ತಾ. | 2,000.00 |
| 1643. | ಶ್ರೀ ಹನುಮಣ್ಣ ಬಿನ್ ಲೇ॥ ಚಿನ್ನಪ್ಪ ರ‍್ಯಾಪ್ಟೆ ಗ್ರಾಮ, ಹುಸೇನಪುರ ಅಂ. ಪಾವಗಡ. | 5,000.00 |
| 1644. | ಶ್ರೀ ಭೈರಣ್ಣ, ಸೇವಕರು, ಶ್ರೀ ಸಿದ್ಧಗಂಗಾ ಮಹಿಳಾ ಪ್ರಥಮ ದರ್ಜೆ ಕಾಲೇಜು, ತುಮಕೂರು. | 500.00 |
| 1645. | ಶ್ರೀ ಶಿವಶಂಕರಯ್ಯ ಸೇವಕರು, ಶ್ರೀ ಸಿದ್ಧಗಂಗಾ ಮಹಿಳಾ ಪ್ರಥಮ ದರ್ಜೆ ಕಾಲೇಜು, ತುಮಕೂರು. | 800.00 |
| 1646. | ಶ್ರೀಮತಿ ಡಿ.ಆರ್. ರೇಣುಕಾಂಭ, ಸೇವಕರು, ಶ್ರೀ ಸಿದ್ಧಗಂಗಾ ಮಹಿಳಾ ಪ್ರಥಮ ದರ್ಜೆ ಕಾಲೇಜು, ತುಮಕೂರು. | 500.00 |
| 1647. | ಶ್ರೀ ಬಿ. ಸರೋಜ, ಸೇವಕರು, ಶ್ರೀ ಸಿದ್ಧಗಂಗಾ ಮಹಿಳಾ ಪ್ರಥಮ ದರ್ಜೆ ಕಾಲೇಜು, ತುಮಕೂರು. | 500.00 |
| 1648. | ಶ್ರೀ ಎಸ್.ಶಿವಣ್ಣ, ಸೇವಕರು, ಶ್ರೀ ಸಿದ್ಧಗಂಗಾ ಮಹಿಳಾ ಪ್ರಥಮ ದರ್ಜೆ ಕಾಲೇಜು, ತುಮಕೂರು. | 500.00 |
| 1649. | ಶ್ರೀಮತಿ ಕೆ.ಎಲ್. ರಾಧಾಮಣಿ, ಪ್ರಾಂಶುಪಾಲರು, ಬಸವೇಶ್ವರನಗರ, ಬೆಂಗಳೂರು. | 5000.00 |
| 1650. | ಶ್ರೀ ಜಿ. ಸಿದ್ದನಂಜಪ್ಪ ವಿಜಯನಗರ, ಬೆಂಗಳೂರು. | 1000.00 |
| 1651. | ಶ್ರೀ ಸಾಬೇಗೌಡ ಬಿನ್ ನಿಂಗಪ್ಪ ಯತಿಗಿರಿ, ಹಯ್ಯಾಳ, ಶಹಾಪುರ ತಾ॥. | 1005.00 |
| 1652. | ಶ್ರೀ ಎಸ್.ಪಿ. ಧರನೇಶ್, ಆಡುಗೋಡಿ, ಬೆಂಗಳೂರು. | 10,000.00 |
| 1653. | ಶ್ರೀ ಬಿ. ರಾಮಣ್ಣ(ಪ್ಲೋರ್‌ಮಿಲ್) ಚಕ್ರಭಾವಿ & ಅಂಚೆ, ಮಾಗಡಿ ತಾ॥ | 1,000.00 |
| 1654. | ಶ್ರೀ ನಾಗರಾಜು ಬಿನ್ ಕುಂಭಯ್ಯಶೆಟ್ಟಿ ಅಗ್ರಹಾರ, ಕುಣಿಗಲ್, ತುಮಕೂರು. | 1,101.00 |
| 1655. | ಧಾನ್ಯ ವ್ಯಾಪಾರಿಗಳ ಸಂಘ (ರಿ.) ಬಟವಾಡಿ, ತುಮಕೂರು. | 1,000.00 |
| 1656. | ಶ್ರೀ ಬಿ.ಸಿ. ರಾಮಕೃಷ್ಣ ವಿದ್ಯಾನಗರ, ತುಮಕೂರು. | 2,001.00 |
| 1657. | ಶ್ರೀ ಮಣಿಗಯ್ಯ, ಸಮಾಜಶಾಸ್ತ್ರ ಉಪನ್ಯಾಸಕರು, ಶ್ರೀ.ಸಿ.ಮ. ಕಾಲೇಜು, ತುಮಕೂರು. | 20,000.00 |
| 1658. | ಶ್ರೀ ಕೆ.ಆರ್. ಶಿವಣ್ಣ ಚೇತನ ಬಡಾವಣೆ, ಬಟವಾಡಿ, ತುಮಕೂರು. | 1,001.00 |
| 1659. | ಶ್ರೀ ಜಿ. ಬಸವರಾಜಯ್ಯ, ನಿವೃತ್ತ ಮುಖ್ಯಶಿಕ್ಷಕರು, ಗವಿಯಪ್ಪನಪಾಳ್ಯ, ಹೆಗ್ಗಂದ, ನೆಲಮಂಗಲ ತಾ. | 2,001.00 |
| 1660. | ಶ್ರೀ ಎಸ್. ಸಿದ್ದಪ್ಪನವರು ಮತ್ತು ಕುಟುಂಬದವರು ಆರೂಡಿ, ದೊಡ್ಡಬಳ್ಳಾಪುರ ತಾ., ಬೆಂ.ಗ್ರಾ.ಜಿ. | 1,000.00 |
| 1661. | ಶ್ರೀ ಕೆ.ಬಿ. ಚಿಕ್ಕನಾರಾಯಣಪ್ಪ ರಾಮಕೃಷ್ಣ ಬ್ಲಾಕ್, ಶೇಷಾದ್ರಿಪುರಂ, ಬೆಂಗಳೂರು. | 1,001.00 |
| 1662. | ಶ್ರೀ ಶಂಕರಾರಾಧ್ಯ ಬಿನ್ ಗುರುಚನ್ನಬಸವದೇವರು ಓ.ಟಿ.ಸಿ. ರಸ್ತೆ, ಕಾಟನ್‌ಪೇಟೆ, ಬೆಂಗಳೂರು. | 1,001.00 |
| 1663. | ಶ್ರೀ ಎಂ.ಜಿ. ನಿರಂಜನ್ ಬಸವನಗುಡಿ, ಸೌತ್‌ಎಂಡ್ ರಸ್ತೆ, ಬೆಂಗಳೂರು. | 1,001.00 |
| 1664. | ಶ್ರೀ ಕೆ. ವೀರಭದ್ರಯ್ಯ, ನಿ. ಶಿಕ್ಷಕರು, ಚೋಳೂರು ಪಾಳ್ಯ, ಬೆಂಗಳೂರು. (ಶ್ರೀಮತಿ ಸಿದ್ಧಮ್ಮ ಮತ್ತು ಕೆಂಪಮ್ಮ ಇವರ ಹೆಸರಿನಲ್ಲಿ) | 1,001.00 |
| 1665. | ಶ್ರೀ ಜಗದೀಶಪ್ಪ ಮತ್ತು ಮಕ್ಕಳು ನೆಲ್ಲಿಕೊಪ್ಪ, ಸಾಗರ ತಾ॥ ಶಿವಮೊಗ್ಗ ಜಿಲ್ಲೆ. | 1,000.00 |
| 1666. | ಶ್ರೀ ಚಂದ್ರಶೇಖರಯ್ಯ, ಶಿಕ್ಷಕರು, ಕುರುಡಿ, ಗೌರಿಬಿದನೂರು ತಾ., | 2,500.00 |
| 1667. | ಶ್ರೀ ಬ.ಇ. ರಾಜಶೇಖರಪ್ಪ, ಬ್ರಾಂಚ್ ಪೋಸ್ಟ್ ಮಾಸ್ಟರ್ ಬಾಸುಂಡಿ & ಅಂ., ಬೀರೂರು. | 1,000.00 |
| 1668. | ಶ್ರೀ ಹೆಚ್.ಎಂ. ಸಿದ್ಧಪ್ಪ, ಮುಖ್ಯಶಿಕ್ಷಕರು, ಜೆ.ಎಸ್.ವಿ.ಕೆ. ಚನ್ನೇನಹಳ್ಳಿ, ಬೆಂಗಳೂರು. | 1,500.00 |
| 1669. | ಶ್ರೀ ಉಮಾಶಿವರಾಮ್ ಮಾರುತಿನಗರ, ನಾಗರಭಾವಿ ರಸ್ತೆ, ಬೆಂಗಳೂರು. | 1,001.00 |
| 1670. | ಶ್ರೀ ಎಂ.ಎಸ್. ನಾಗರಾಜ್ ಕೇರಾಫ್ ಜೆ.ವಿ. ಶಶಿಕುಮಾರ್ ಸ್ಟೋರ್‌ಬಾ ರಸ್ತೆ, ಗಾಂಧೀನಗರ, ತುಮಕೂರು. | 1,001.00 |
| 1671. | ಶ್ರೀ ಕೆ.ಪಿ. ಆಶಾ, ರೇಷ್ಮೆ ವಿಸ್ತರಣಾಧಿಕಾರಿ, ಹೆಬ್ಬೂರು, ತುಮಕೂರು ತಾ॥ ಮತ್ತು ಜಿಲ್ಲೆ. | 501.00 |
| 1672. | ಶ್ರೀ ಪಿ. ಸೋಮಶೇಖರ್ ಬಿ.ಟಿ.ಎಂ. ಲೇಔಟ್, ಬೆಂಗಳೂರು. | 1001.00 |

–ಮುಂದುವರೆಯುತ್ತದೆ.

RNI No. 17139/69

"Siddaganga" Monthly - Postal Reg. No. KA/SK/TMR/385/2006-08

# ಜಾತ್ರೆ ಅಂಗವಾಗಿ ನಡೆದ ವಿವಿಧ ಉತ್ಸವಗಳು



ಶ್ರೀಕ್ಷೇತ್ರದ ಆರಾಧ್ಯದೈವ ಶ್ರೀ ಸಿದ್ಧಲಿಂಗೇಶ್ವರರು

Cover printed at : Geetanjali Graphics, # 4, M.S.R. Indl. Estate, Bangalore-54. Ph : 23604087